ಪ್ರಚಾರ ಪುಸ್ತಕ ಮಾಲೆ

259

# ಕನ್ನಡ ಕವಿಗಳು ಕಂಡ ಕ್ರೀಡೆಗಳು

ಡಾ. ಕೆ. ಶ್ರೀಕಂಠಯ್ಯ



ಪ್ರಚಾರ ಪುಸ್ತಕಮಾಲೆ-೨೫

# ಕನ್ನಡ ಕವಿಗಳು ಕಂಡ ಕ್ರೀಡೆಗಳು

ಡಾ. ಕೆ. ಶ್ರೀಕಂಠಯ್ಯ






೧೯೮೯

# ಮುನ್ನುಡಿ

ನಮ್ಮ ವಿಶ್ವವಿದ್ಯಾನಿಲಯದ ಮೊದಲನೆಯ ಛಾನ್ಸಲರೂ ಆಳಿದ ಮಹಾಸ್ವಾಮಿಯವರೂ ಆದ ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರ್ ಬಹದ್ದೂರ್ ಅವರು ಮೊದಲನೆಯ 'ಸೆನೆಟ್' ಸಭೆಯ ಪ್ರಾರಂಭೋತ್ಸವದ ಸಮಯದಲ್ಲಿಯೂ, ಮೊದಲನೆಯ 'ಕಾನ್ವೊಕೇಷನ್' ಸಮಾರಂಭದ ಕಾಲದಲ್ಲಿಯೂ ವಿಶ್ವವಿದ್ಯಾನಿಲಯದ ವಿದ್ಯೆ ಪಟ್ಟಣಗಳಲ್ಲಿ ಮಾತ್ರ ಕೇಂದ್ರೀಕೃತವಾಗದೆ ನಾಡಿನ ಮೂಲೆ ಮೂಲೆಗೂ ಪ್ರಸರಿಸಿ, ಉಚ್ಚಶಿಕ್ಷಣವನ್ನು ಪಡೆಯಲು ಅವಕಾಶ ಹೊಂದದ ಸಾಮಾನ್ಯ ಜನರ ಹೃದಯವನ್ನು ಬೆಳಗಿ, ಸಮಷ್ಟಿಪ್ರಜ್ಞೆಯ ವಿಕಾಸಕ್ಕೆ ಕಾರಣವಾಗಬೇಕು ಎಂಬ ಮಹದಾಶಯವನ್ನು ವ್ಯಕ್ತಪಡಿಸಿದ್ದರು. ಅವರ ಆಶಯ ಇಂದು ಫಲದಾಯಕವಾಗುತ್ತಿದೆ. ನಮ್ಮ ವಿಶ್ವವಿದ್ಯಾನಿಲಯದ ಪ್ರಸಾರಾಂಗ, ನಾಡಿನ ಮೂಲೆಮೂಲೆಯಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಿ, ಸಂಸ್ಕೃತಿ ಪ್ರಸಾರ ಕಾರ್ಯವನ್ನು ಬಹಳ ಸಮರ್ಪಕವಾದ ರೀತಿಯಲ್ಲಿ ನೆರವೇರಿಸುತ್ತಿದೆ.

ಜನರು ಬಯಸಿದೆಡೆಗಳಲ್ಲಿ ಈ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸಲಾಗುತ್ತಿದೆ. ವಿಶ್ವವಿದ್ಯಾನಿಲಯದಲ್ಲಿ ಅನೇಕ ವರ್ಷಗಳು ಪಾಠ ಹೇಳಿ ಮಿಗಿಲಾದ ಜ್ಞಾನವನ್ನು ಗಳಿಸಿರುವ ಘನ ವಿದ್ವಾಂಸರು ಜನರು ಅಪೇಕ್ಷಿಸುವ ವಿಷಯಗಳನ್ನು ಕುರಿತು ಸರಳವೂ, ಸುಲಭಗ್ರಾಹ್ಯವೂ ಆದ ಕನ್ನಡ ಭಾಷೆಯ ಮೂಲಕ ತಿಳುವಳಿಕೆ ಕೊಡುತ್ತಾರೆ. ಜ್ಞಾನವನ್ನು ಹಂಚುವುದರಲ್ಲೂ ಆನಂದವಿದೆ. ಅಧ್ಯಾಪಕವೃಂದದವರು ಹಳ್ಳಿಗಳಲ್ಲಿಯೇ ಒಂದೆರಡು ದಿನ ನೆಲೆಸಿ, ಸಾಮಾನ್ಯ ಜನರಂತೆಯೇ ಇದ್ದು

ಕೊಂಡು, ಗಳಿಸಿರುವ ಜ್ಞಾನವನ್ನು ಜನಸಾಮಾನ್ಯರ ಹೃದಯ ದಲ್ಲಿ ಬಿತ್ತಿ, ತಾವೂ ಆನಂದವನ್ನು ಅನುಭವಿಸುತ್ತಾ ಮತ್ತು ಇತರರಿಗೂ ಆನಂದವನ್ನುಂಟುಮಾಡುತ್ತಾರೆ. ಈ ಉಪನ್ಯಾಸ ಗಳು ವಿಶ್ವವಿದ್ಯಾನಿಲಯದ ಮೆಟ್ಟಿಲನ್ನು ಹತ್ತಲು ಅವಕಾಶವಿಲ್ಲ ದವರಿಗೆ ವಿಶ್ವವಿದ್ಯಾನಿಲಯ ವಿದ್ಯೆಯ ಸೌಲಭ್ಯವನ್ನು ನೀಡಲು ನೆರವಾಗುತ್ತವೆ. ವಿಶ್ವವಿದ್ಯಾನಿಲಯದಲ್ಲಿ ಜ್ಞಾನವನ್ನು ಗಳಿಸಿ, ನಾಡಿನ ಬೇರೆ ಬೇರೆ ಭಾಗಗಳಲ್ಲಿ ವಿವಿಧ ಕಾರ್ಯರಂಗಗಳಲ್ಲಿ ನಿರತರಾಗಿರುವ ಜನರಿಗೆ ಮಾರ್ಗದರ್ಶಕವಾಗುತ್ತವೆ. ನಮ್ಮ ಸಮಾಜದಲ್ಲಿನ ಭೇದಭಾವಗಳನ್ನು ಹೋಗಲಾಡಿಸಿ ಸಮಾನತೆ ಯನ್ನು ಸ್ಥಾಪಿಸಲು ಸಹಾಯಕವಾಗುತ್ತವೆ. ವಿಶ್ವವಿದ್ಯಾ ನಿಲಯಕ್ಕೂ ಸಾಮಾನ್ಯ ಜನತೆಗೂ ಮಧ್ಯೆ ಇರುವ ದೊಡ್ಡ ಅಂತರವನ್ನು ಪರಿಹರಿಸಲು ನೆರವಾಗುತ್ತವೆ; ಜನರಲ್ಲಿ ಜ್ಞಾನೋದಯವನ್ನುಂಟುಮಾಡಿ, ಅವರ ದುಃಖಕ್ಕೆ ಮೂಲ ಕಾರಣವಾದ ಅಸಮಾನತೆಯನ್ನು ಹೋಗಲಾಡಿಸಿ, ವಿಶಾಲ ಭಾವನೆಯು ಮೂಡುವಂತೆ ಮಾಡುತ್ತವೆ.

ಪ್ರಚಾರೋಪನ್ಯಾಸಗಳನ್ನು ಕಿರುಹೊತ್ತಿಗೆಗಳ ರೂಪದಲ್ಲಿ ಪ್ರಕಟಿಸಲಾಗುತ್ತಿದೆ. ಈ ಉಪನ್ಯಾಸಗಳನ್ನು ಕೇಳಲು ಅವಕಾಶ ಸಿಕ್ಕದವರು ಈ ಹೊತ್ತಿಗೆಗಳನ್ನು ಕೊಂಡು ಓದಿ ತಿಳುವಳಿಕೆ ಪಡೆಯಲು ಅವಕಾಶವಿದೆ. ಈ ಮಾಲೆಯ ಪುಸ್ತಕಗಳು ಹೆಚ್ಚು ಜನಪ್ರಿಯವಾಗಿವೆ. ಪುಸ್ತಕಗಳು ಅಚ್ಚಿನ ಮನೆಯಿಂದ ಹೊರಬಿದ್ದ ಕೂಡಲೆ ಜನರು ಆದರದಿಂದ ಕೊಂಡು ಓದುತ್ತಾರೆ. ಈ ಮಾಲೆ ಯಲ್ಲಿ ಈಗಾಗಲೇ ಭೌತವಿಜ್ಞಾನ, ರಸಾಯನವಿಜ್ಞಾನ, ಪ್ರಾಣಿ ವಿಜ್ಞಾನ, ವೈದ್ಯವಿಜ್ಞಾನ, ಗಣಿತವಿಜ್ಞಾನ, ಸಮಾಜವಿಜ್ಞಾನ, ಅರ್ಥಶಾಸ್ತ್ರ, ತತ್ತ್ವಶಾಸ್ತ್ರ, ಸಾಹಿತ್ಯ ಮತ್ತು ಕಲೆ ಮುಂತಾದ

ವಿಷಯಂಗಳನ್ನು ಕುರಿತ ಇನ್ನೂರಐವತ್ತೆಂಟು ಪುಸ್ತಕಗಳು ಪ್ರಕಟವಾಗಿವೆ ಎಂಬುದನ್ನು ತಿಳಿಸಲು ನನಗೆ ಬಹಳ ಸಂತೋಷವಾಗಿದೆ.

ಈ ಮಾಲೆಯಲ್ಲಿ ಈಗ ಹೊರಬೀಳುತ್ತಿರುವ ಡಾ. ಕೆ. ಶ್ರೀಕಂಠಯ್ಯ ಅವರ 'ಕನ್ನಡ ಕವಿಗಳು ಕಂಡ ಕ್ರೀಡೆಗಳು' ಹೆಚ್ಚು ಜನಪ್ರಿಯವಾಗಲೆಂದು ನಾನು ಆಶಿಸುತ್ತೇನೆ.

**ಶ್ರೀಮತಿ ಪಿ. ಸೆಲ್ವಿದಾಸ್**

ಕುಲಪತಿಗಳು

## ವಿಷಯ ಸೂಚಿ

## ಪೀಠಿಕೆ

ಕ್ರೀಡೆಗಳಿಗೆ ಸಂಬಂಧಿಸಿದಂತೆ ನಮ್ಮ ಕವಿಗಳು ಏನಾದರೂ ಹೇಳಿದ್ದಾರೆಯೆ ಎಂಬ ಕುತೂಹಲದಿಂದ ಕನ್ನಡ ಸಾಹಿತ್ಯ ಕೃತಿಗಳ ಒಂದು ಕಿರುಸಮೀಕ್ಷೆ ನಡೆಸಿದಾಗ ಅನೇಕ ಕುತೂಹಲಕರವಾದ ವಿಷಯಗಳು ದೊರೆತವು. ಪರಿಶೀಲಿಸಿದ ಸುಮಾರು 40–50 ಕೃತಿಗಳಲ್ಲಿ ಅರವತ್ತು ಆಟದ ಹೆಸರುಗಳು ದೊರೆತವು. ಅವುಗಳಲ್ಲಿ ಬಹುಮಟ್ಟಿನವು ಹಿಂದಿನಿಂದ ಕೇಳಿಬರುತ್ತಿರುವ ಇಂದಿಗೂ ಉಳಿದು ಕೊಂಡಿರುವ ಆಟಗಳೆ! ಆದರೆ ಕವಿಗಳು ಹೇಳಿರುವ ಇನ್ನೂ ಎಷ್ಟೋ ಆಟದ ಹೆಸರುಗಳು ಅಪರಿಚಿತ. ಕಿಟ್ಟೆಲ್ ಕೋಶ ದಲ್ಲಾಗಲೀ, ಕನ್ನಡ–ಕನ್ನಡ ನಿಘಂಟಿನಲ್ಲಾಗಲೀ ಆ ಆಟಗಳ ಬಗೆಗೆ ವಿವರಣೆ ದೊರೆಯುವುದಿಲ್ಲ. ದೊರಕಿದ ಕೆಲವಕ್ಕೆ 'ಒಂದು ಬಗೆಯ ಆಟ' ಎಂದಷ್ಟೆ ಅಸ್ಪಷ್ಟ ವಿವರಣೆ. ಅಲ್ಲೂ ಪ್ರಶ್ನಾ ರ್ಥಕ ಚಿಹ್ನೆ (?).

ಕುಮಾರವ್ಯಾಸ ಕುರುಪಾಂಡವರು ಬಾಲ್ಯದಲ್ಲಿ ಆಡಿದ ರೆಂದು ಹೇಳಿದ ಆಳಿನೇರಿಕೆ, ಗುರಿಯಾಳು, ಚೆಂಡಿನ ಹೂಣಿತೆ, ಗುಡುಗು, ಚಿಟ್ಟುಮುರಿಯಾಟ, ಗುಮ್ಮನ ಬಡಿವ ಕತ್ತಲೆಗುದ್ದು, ಕುಬದಗಡಣೆ, ಅಸಗವರಿ, ಹರಿಹಲಗೆ, ಕೆಡಹುಕುಟ್ಟಿಗ–ಮುಂತಾದ ಆಟಗಳ ಅರ್ಥ ಕೂಡ ಅಸ್ಪಷ್ಟವಾಗಿಯೇ ಇದೆ. ಅದೇ ಕವಿ ಅಲ್ಲೇ ಹೇಳುವ ಕೋಲುಮರನಾಟ, ಕಣ್ಣುಮುಚ್ಚಾಲೆ, ಹಿಡಿಗ ವಡೆ, ಚಿಣಿಕೋಲು ಮುಂತಾದ ಆಟಗಳಷ್ಟು ಸುಲಭವಾಗಿ ಮೇಲೆ ಹೇಳಿದ ಆಟಗಳ ಹೆಸರನ್ನು ಕೇಳಿದಾಗ ಅರ್ಥ ಸ್ಪಷ್ಟನೆ ಕಲ್ಪನೆ ಬರುವುದಿಲ್ಲ.

ಹಾಗೆಯೇ ಇತರ ಕೆಲವು ಕವಿಗಳು ಹೇಳಿರುವ ಒಪ್ಪಿ, ಗುಮ್ಮನಗುಸುಕು, ಕಟ್ಟುಂಗುರೆ ಜಾಸುಗುಪ್ಪಾಳೆ, ಜಲಿಬಿಲ್ಲಿ

ಬಾರುಗಂತ್ರ, ರಾಯಂಬೊಗರಿ, ಸೊಲ್ಲೆಹ, ನಿಡುಗವಣೆ, ಚಿಳ್ಳಿಪಿಳ್ಳಿ- ಮುಂತಾದ ಆಟಗಳ ಸ್ವರೂಪವೂ ಅಸ್ಪಷ್ಟವಾಗಿದೆ. ಕನಕದಾಸರು ಜೂಜಾಟದ ಸಂದರ್ಭದಲ್ಲಿ ಹೇಳುವ 'ಸೂಳೆಬಂಟಿಕೆ, ರುಣದ ಸಂವಾಜ, ಪೆರ್ಗುಂಡಿಗಳ ಚರ್ಚೆ....' ಎಂಬ ಮಾತುಗಳಿಗೆ ಜೂಜಾಟದ ಸಂದರ್ಭದಲ್ಲಿ ಇರುವ ವಿಶೇಷ ಅರ್ಥವ್ಯಾಪ್ತಿಯನ್ನು ಕಂಡುಕೊಳ್ಳಬೇಕಾಗಿದೆ. ಲಿನ್‌ಷಾಟನ್ ಎಂಬ ಪ್ರವಾಸಿ ಕನ್ನಡಿಗರಿಗೆ ನೀರಿನಮೇಲೆ ಅನೇಕ ಕಸರತ್ತುಗಳನ್ನು ಮಾಡುವುದು, ಈಜುವುದು ಮುಂತಾದ ಅನೇಕ ಆಟಗಳು ಬರುತ್ತಿದ್ದವೆಂದು ಹೇಳುತ್ತಾನೆ. ಜಲಕ್ರೀಡೆಯ ಬಗೆಗೆ ಕವಿಗಳ ವರ್ಣನೆಯಲ್ಲಿ ವಿಷಯ ದೊರೆತರೂ ನೀರಿನಮೇಲೆ ಮಾಡುತ್ತಿದ್ದ ಕಸರತ್ತುಗಳ ಬಗೆಗೆ ನಮ್ಮ ಕವಿಗಳ ಗಮನ ಹರಿದಂತಿಲ್ಲ (?). ಅದೇ ಆನೆ ಕುದುರೆಗಳ ಮೇಲೆ ಕುಳಿತು ನಿಂತು ಸವಾರರು ನಡೆಸುತ್ತಿದ್ದ ಕೌಶಲ ಪ್ರದರ್ಶನಗಳನ್ನು ಅವರು ಗಮನಿಸಿದ್ದಾರೆ. ಇದಕ್ಕೆ ರತ್ನಾಕರ ಹಾಗೂ ಗೋವಿಂದ ವೈದ್ಯರ ವರ್ಣನೆಗಳೇ ಸಾಕ್ಷಿ.

ಇಲ್ಲಿ ೫೦-೬೦ ಆಟಗಳ ಹೆಸರನ್ನು ಪ್ರಸ್ತಾಪಿಸಿದೆ. ಆದರೆ ಜೂಜಾಟ, ಚೆಂಡಾಟ, ಪಗಡೆ, ಚದುರಂಗ, ಗಜ್ಜುಗ ಮುಂತಾದ ಆಟಗಳು; ಇಂದ್ರಜಾಲ, ಮಹೇಂದ್ರಜಾಲ, ಕೋಲಾಟ, ಡೊಂಬರಾಟ, ಬೈರೂಪದಾಟ, ಹರಿಯ ದಶಾವತಾರ ನಾಟಕ, ನೃತ್ಯ- ಮುಂತಾದ ಪ್ರದರ್ಶನಗಳು; ಉರಿಬಾಣ, ಚೇಳುಬಾಣ, ಚಕ್ರಬಾಣ ಮುಂತಾದ ಬೆಂಕಿ ಪ್ರದರ್ಶನಗಳು; ಆನೆಕುದುರೆಗಳಿಂದ ವಿವಿಧ ಮನೋರಂಜನೆ; ಕೋಳಿ, ಮಹಿಷ, ಮೇಷ, ಮದಗಜ, ಪಕ್ಕಳ, ಸಿಪಿಲೆ, ಲಾವುಗೆ, ಕರಡಿ, ಸಿಂಹ-ಮುಂತಾದ ಪ್ರಾಣಿಗಳಿಂದ ಕಾಳಗ; ಬೇಟೆ-ಇವೇ ಮುಂತಾದುವುಗಳನ್ನು ಕುರಿತಂತೆ ಕವಿಗಳು ಕೊಡುವ ವರ್ಣನೆ ಮನಮೋಹಕವಾಗಿದೆ.

ಕೆಲವು ಕ್ರೀಡೆಗಳನ್ನು ಕುರಿತು ಬಣ್ಣಿಸುವ ಕೃತಿಗಳ ಹಾಗೂ ಅದರ ಕರ್ತೃಗಳ ಬಗೆಗೆ ನಾಲ್ಕು ಮಾತುಗಳನ್ನು ಹೇಳಬಹುದು: ಓದುಗರಿಗೆ ಕೌತುಕವನ್ನು ಮೂಡಿಸುವಂತಹ ವಿವಿಧ ಜೂಜಿ ನಾಟಗಳ ವರ್ಣನೆಯನ್ನು ನೀಡುವ ಕನಕದಾಸರ 'ಮೋಹನ ತರಂಗಿಣಿ'; ರಾಜಮನೆತನದವರ ಚೆಂಡಾಟದ ರಂಜನೀಯ ವಿವರ ಣಾತ್ಮಕ ಚಿತ್ರವನ್ನು ನೀಡುವ ನಂಜುಂಡನ 'ರಾಮನಾಥಚರಿತ'; ಮೈನವಿರೇಳಿಸುವಂತಹ ಭೀಕರ ಮೃಗಗಳ ಕಾಳಗದ ಚಿತ್ರವನ್ನು ಕೊಡುವ ನಂಜುಂಡನ 'ರಾಮನಾಥಚರಿತ', ಗೋವಿಂದವೈದ್ಯನ 'ಕಂಠೀರವನರಸರಾಜವಿಜಯ'; ಖಾಡಾಖಾಡಿಯಾಗಿ ಖಡ್ಗದಿಂದ ಹೋರಾಡಿದ ವೀರರಿಬ್ಬರ ಖಡ್ಗಯುದ್ಧದ ಚಿತ್ರವನ್ನು ನೀಡುವ ಲಿಂಗಣ್ಣಕವಿಯ 'ಕೆಳದಿನೃಪವಿಜಯ'; ಮನವನ್ನು ಸೂರೆಗೊಂಡು ಕೌತುಕಗೊಳಿಸುವ ಆನೆ ಕುದುರೆಗಳಾಟ, ಉರಿಚೇಳುಬಾಣ, ಚಕ್ರ ಬಾಣ ಮುಂತಾದ ಬೆಂಕಿ ಪ್ರದರ್ಶನಗಳು, ಇಂದ್ರಜಾಲ, ಮಹೇಂದ್ರ ಜಾಲ–ಮುಂತಾದ ಮನೋಜ್ಞ ಚಿತ್ರಗಳನ್ನು ದೊರಕಿಸುವ ರಸಿಕ ಚಕ್ರಿ ರತ್ನಾಕರನ 'ಭರತೇಶ ವೈಭವ', ಗೋವಿಂದ ವೈದ್ಯನ 'ಕಂಠೀರವ ನರಸರಾಜವಿಜಯ': ಅಣ್ಣಾಜಿ ಕೊಡುವ ಡೊಂಬರಾಟದ ಚಿತ್ರ; ಪುರಂದರದಾಸರು ನೀಡುವ 'ಗಜ್ಜುಗ ದಾಟದ ವರ್ಣನೆ'; ಕುಮಾರವ್ಯಾಸ ಕೊಡುವ 'ಮಲ್ಲಯುದ್ಧದ ವರ್ಣನೆ'–ಇವುಗಳೊಂದೊಂದೂ ನಮ್ಮ ಸ್ಮರಣೆಯಲ್ಲಿ ಬಹು ಕಾಲ ನಿಲ್ಲುವ ಜೀವಂತ ಚಿತ್ರಗಳು.

ಕವಿಗಳು ಕೊಡುವ ಬೇಟೆಯ ವರ್ಣನೆಯಲ್ಲಿ ಓದುಗರ ಕುತೂ ಹಲವನ್ನು ಕೆರಳಿಸುವುದು ಅಲ್ಲಿ ಬರುವ ಅಸಂಖ್ಯಾತ ಬಲೆಗಳ ಹೆಸರುಗಳು. ಆ ಬಲೆಗಳದೇ ಒಂದು ಪಟ್ಟಿಮಾಡಿ, ಅವುಗಳು ದೊರೆಯುವ ಕೃತಿಗಳ ಹೆಸರನ್ನು ಸೂಚಿಸಿ ಕಡೆಯಲ್ಲಿ ಕೊಟ್ಟಿದೆ.

ಬೇಟೆಗೆ ಸಂಬಂಧಿಸಿದಂತೆ ಅದ್ಭುತವಾದ ಚಿತ್ರಗಳನ್ನು ನೀಡುವುದರಲ್ಲಿ ರಾಘವಾಂಕನ 'ಹರಿಶ್ಚಂದ್ರಕಾವ್ಯ', ನಾರಣಪ್ಪನ 'ಗದುಗಿನ ಭಾರತ', ಸಾಳ್ವನ 'ಸಾಳ್ವಭಾರತ', ನಾಗರಾಜನ 'ಪುಣ್ಯಾಸ್ರವ', ಷಡಕ್ಷರಿಯ 'ಶಬರಶಂಕರವಿಳಾಸ'–ಈ ಕೃತಿಗಳನ್ನು ನೋಡಬಹುದು.

ಹೀಗೆ ಕವಿಗಳು ಕೊಡುವ ಕ್ರೀಡೆಯ ವರ್ಣನೆಗಳಲ್ಲಿ ಅನೇಕ ಕ್ರೀಡೆಗಳಿಗೆ ಸಂಬಂಧಿಸಿದಂತೆ ಸೊಗಸಾದ ಚಿತ್ರಗಳು ದೊರೆಯುತ್ತವೆ. ಬಗೆಬಗೆಯ ಜೂಜಂಗಳು, ಬೇಟೆಗಳು, ಮಲ್ಲಯುದ್ಧದ ಪಟ್ಟುಗಳು, ಖಡ್ಗಯುದ್ಧದ ವರಿಸೆಗಳು, ಪಗಡೆಯಾಟಕ್ಕೆ ಸಂಬಂಧಿಸಿದಂತೆ ಅನೇಕ ಪಾರಿಭಾಷಿಕ ಶಬ್ದಗಳು–ಹುಡುಕುತ್ತಾ ಹೋದರೆ ಸಂಶೋಧಕರಿಗೆ ಹತ್ತಾರು ವಿಷಯಗಳು ದೊರೆತು ಕವಿಗಳ ವರ್ಣನೆಗಳನ್ನು ಕೇವಲ ಉತ್ಪ್ರೇಕ್ಷೆ ಎಂದು ಸದಾಕಾಲ ತಳ್ಳಿ ಹಾಕುವುದು ಸಲ್ಲ–ಅಲ್ಲೂ ಅನೇಕ ಉಪಯುಕ್ತ ವಿಷಯಗಳು ನಾನಾ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ದೊರೆಯುತ್ತವೆ ಎಂಬುದನ್ನು ಮನಗಾಣಬಹುದು.

'ಕವಿಗಳು ಕಂಡ ಕ್ರೀಡೆಗಳು' ಎಂಬ ಈ ಕಿರುಹೊತ್ತಗೆಯಲ್ಲಿ ನಾನು ಪ್ರಸ್ತಾಪಿಸಿರುವ ಕ್ರೀಡೆಗಳು, ಪರಿಶೀಲಿಸಿರುವ ಕೃತಿಗಳು, ಒಂದು ಸಾವಿರ ವರ್ಷಗಳ ಸುದೀರ್ಘ ಲಿಖಿತ ಇತಿಹಾಸವನ್ನು ಹೊಂದಿರುವ ಕನ್ನಡ ಸಾಹಿತ್ಯವಾಹಿನಿಯಲ್ಲಿ ಒಂದು ಕಿರುಪೊನಲು ಮಾತ್ರ. ಕನ್ನಡ ಸಾಹಿತ್ಯದ ಸುವರ್ಣ ಭಂಡಾರದಲ್ಲಿ ಇನ್ನೂ ಎಷ್ಟೋ ಕೃತಿಗಳನ್ನು ಪರಿಶೀಲಿಸುವ ಅವಕಾಶವಿದೆ. ಆ ಕೃತಿಗಳಲ್ಲಿ ನಮ್ಮ ಕವಿಗಳು ಇನ್ನೂ ಎಷ್ಟೋ ಹೊಸ ಕ್ರೀಡೆಗಳನ್ನು ಹೇಳಿರಬಹುದು. ನಾನು ಪರಿಶೀಲಿಸಿದ ಕೃತಿಗಳಲ್ಲೂ ಸಹ ಎಷ್ಟೋ ಕ್ರೀಡೆಗಳು ನುಸುಳಿಕೊಂಡಿರಲಿಕ್ಕೂ ಸಾಧ್ಯ. ಕ್ರೀಡೆಗಳ ಬಗೆಗೆ

ಇನ್ನೂ ಹೆಚ್ಚಿನ ಸಂಶೋಧನೆ ನಡೆಸಬಯಸುವವರಿಗೆ ನನ್ನ ಈ ಒಂದು ಕಿರುಪ್ರಯತ್ನ ಸ್ಫೂರ್ತಿ ನೀಡಿದರೆ ನನ್ನ ಶ್ರಮ ಸಾರ್ಥಕ ವಾದಂತೆ !

### ಭರತಖಂಡ ಅನೇಕ ಕ್ರೀಡೆಗಳ ತವರು

ಜನರು ತಮ್ಮ ಬಿಡುವನ್ನು ಕಳೆಯಲು ಹಾಗೂ ಮನಸ್ಸಿಗೆ ಬೇಸರವಾದಾಗ ಉಲ್ಲಾಸಗೊಳ್ಳಲು ಅನೇಕ ಹವ್ಯಾಸಗಳನ್ನು ಬೆಳೆಸಿಕೊಂಡಿದ್ದಾರೆ. ಮನೋರಂಜನೆಯ ಸಾಧನಗಳನ್ನು ಕಂಡು ಕೊಂಡಿದ್ದಾರೆ. ಹಾಗಿಲ್ಲದಿದ್ದರೆ ಜೀವನದಲ್ಲಿ ಒಂದು ರೀತಿಯ ಏಕನಾದ ಉಂಟಾಗಿ ಬಾಳು ಬೇಸರವಾಗುತ್ತದೆ. ಹೀಗೆ ತಮ್ಮ ಬಾಳಿನ ಬೇಸರಿಕೆಯನ್ನು ಕಳೆದುಕೊಂಡು, ಜೀವನವನ್ನು ಹಗುರಾಗಿಸಲು ಜನರು ಕಂಡುಕೊಂಡ ಮನೋರಂಜಕ ಸಾಧನ ಗಳಲ್ಲಿ ಕ್ರೀಡೆಯೂ ಒಂದು. ಇದರ ವ್ಯಾಪ್ತಿ ಬಹಳ ವಿಶಾಲ ವಾದುದು. ಡಾ॥ ಶ್ರೀಕಂಠಶಾಸ್ತ್ರಿಗಳು ಭರತಖಂಡದಲ್ಲಿ ಕ್ರೀಡೆ ಗಳಿಗಿದ್ದ ಪ್ರಾಮುಖ್ಯತೆಯನ್ನು ಕುರಿತು ವಿಚಾರ ಮಾಡುತ್ತಾ ಅನೇಕ ಕ್ರೀಡೆಗಳ ಹೆಸರನ್ನು ಹೇಳುವರು ;

"ಭರತಖಂಡ ಅನೇಕ ಕ್ರೀಡೆಗಳ ತವರು. ಮಲ್ಲಯುದ್ಧ, ಚದುರಂಗ, ಅಶ್ವಕ್ರೀಡೆ, ಎಲೆಯಾಟ (ಇಸ್ಪೀಟ್) ಮುಂತಾದುವು ಭರತಖಂಡದಲ್ಲೇ ಹುಟ್ಟಿ ಪ್ರಪಂಚದಲ್ಲೇ ಹರಡಿಕೊಂಡವು. ದ್ಯೂತ (ಅಕ್ಷಕ್ರೀಡೆ), ಚೌಕಾಬಾರ, ಕೊಯ್ಯಂಗೊಟ್ಟ, ಯೋಗಾಸನ- ಮುಂತಾದುವು ಇತರ ಮನೆಯೊಳಗಣ ಆಟಗಳಾಗಿದ್ದವು. ಕುಸ್ತಿ, ಕುದುರೆ ಜೂಜು, ಬೇಟೆ, ಚಿಣ್ಣಿಕೋಲು, ಚೆಂಡಾಟ, ದೊಂಬರಾಟ, ಕೋಳಿ, ತಗರು, ಕೋಣ, ಆನೆಗಳ ಕಾಳಗ, ವಿಕಟ, ವಿಪ್ರ ವಿನೋದಿ ಗಳ ಕೌಶಲ್ಯ, ನಾಟಕ, ಗೊಂಬೆಯಾಟ, ಕೋಲಾಟ, ಯಕ್ಷಗಾನ-

ಜಲಕ್ರೀಡೆ, ಉದ್ಯಾನ ವಿನೋದ, ಗಾಳಿಪಟ, ಹರಿಕಥಾಕಾಲಕ್ಷೇಪ, ಶತಾವಧಾನ, ಸಮಸ್ಯಾ ಪೂರಣೆ, ಅನ್ತ್ಯಾಕ್ಷರಿ, ಭರತನಾಟ್ಯ, ಸಂಗೀತ, ಕಾಮನಹಬ್ಬ, ಯುಗಾದಿ, ಸುಗ್ಗಿಕಾಲಗಳ ಕುಣಿತ, ಬಿಲ್ಲುಗಾರಿಕೆ, ಕೋಲುವರಸೆ, ಕತ್ತಿವರಸೆ–ಮುಂತಾದ ಅನೇಕ ವ್ಯಾಯಾಮ ಕ್ರೀಡೆಗಳು ಬಹಳ ಕಾಲದಿಂದಲೂ ಬಂದಿವೆ. ಭಾರತೀಯರು ಅತಿಯಾಗಿ ಮಾಂಸಖಂಡವನ್ನು ಮಾತ್ರ ಬೆಳಸದೆ ಸರ್ವಾಂಗಗಳೂ ಸಮ ಪ್ರಮಾಣದಲ್ಲಿ ಬೆಳೆಯಬೇಕೆಂದು 'ಶರೀರ ಮಾದ್ಯಂ ಖಲುಧರ್ಮ ಸಾಧನಂ' ಎಂಬಂತೆ ವ್ಯಾಯಾಮಂಗಳಿಗೆ ಉಚಿತ ಪ್ರಾಮುಖ್ಯತೆಯನ್ನು ಕೊಡುತ್ತಿದ್ದರು[1]."

ಹೀಗೆ ಭರತಖಂಡದಲ್ಲಿ ಅನೇಕ ವ್ಯಾಯಾಮ ಕ್ರೀಡೆಗಳು ಬಹಳ ಕಾಲದಿಂದಲೂ ಬಳಕೆಯಲ್ಲಿವೆ. ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವ ದಿಂದ ಇಂದು ಅನೇಕ ಹೊಸ ಕ್ರೀಡೆಗಳ ಹೆಸರು ಕೇಳಿ ಬರುತ್ತಿದ್ದರೂ ಮೇಲೆ ಕಾಣಿಸಿದ ಎಲ್ಲ ಕ್ರೀಡೆಗಳೂ, ತಲೆಮಾರುಗಳನ್ನು ದಾಟಿ, ಜನ ಜೀವನದಲ್ಲಿ ಸ್ಥಾನ ಪಡೆದು ಇಂದಿಗೂ ರೂಢಿಯಲ್ಲಿವೆ. ಇದು ಅವುಗಳ ವೈಶಿಷ್ಟ್ಯಕ್ಕೂ ಜನಪ್ರಿಯತೆಗೂ ಸಾಕ್ಷಿ.

ಕ್ರೀಡೆಗಳನ್ನು ಮುಖ್ಯವಾಗಿ ಎರಡು ರೀತಿಯಲ್ಲಿ ವರ್ಗೀಕರಿಸ ಬಹುದು. ಜನರು ತಮ್ಮ ಒಂದು ವೈಯಕ್ತಿಕ ಸಂತೋಷಕ್ಕೆಂದೋ ಹವ್ಯಾಸವೆಂದೋ ಬೆಳಸಿಕೊಂಡಿರುವ ಅಥವಾ ಕಂಡುಕೊಂಡಿರುವ ಕೆಲವು ಆಟಗಳು, ವಿನೋದಗಳು ಚಟುವಟಿಕೆಗಳು. ಉದಾಹರಣೆಗೆ ಪಗಡೆ, ಚದುರಂಗ, ಕವಡೆ, ಎಲೆಯಾಟ—ಮುಂತಾದ ಮನೆಯೊಳ ಗಣ ಆಟಗಳು.[2] ಇನ್ನೂ ಕೆಲವು ಬಹುಮಟ್ಟಿಗೆ ಬಾಲಕರೇ ವಿನೋದಕ್ಕಾಗಿ, ಕಾಲಹರಣಕ್ಕಾಗಿ ಆಡುವ ಚೆಂಡು, ಬುಗುರಿ, ಚಿಣ್ಣಿಕೋಲು, ಹಲ್ಲೆ ಮುಂತಾದ ಆಟಗಳು [3]

**ಗಜ್ಜುಗದಾಟ**

ಮನೆಯೊಳಗಣ ಆಟಗಳಾದ ಗಜ್ಜುಗ, ಕವಡೆ, ಪಗಡೆ, ಚದುರಂಗ ಮುಂತಾದುವು ಎಲ್ಲ ಕಾಲಕ್ಕೂ ಪ್ರಿಯವಾಗಿದ್ದವು ಎಂಬುದಕ್ಕೆ ಆಯಾಕಾಲದ ಸಾಹಿತ್ಯ ಕೃತಿಗಳಲ್ಲಿ ಅವುಗಳ ಉಲ್ಲೇಖಗಳೂ, ವರ್ಣನೆಗಳೇ ಸಾಕ್ಷಿ. ಪುರಂದರದಾಸರು ಕೃಷ್ಣನ ಬಾಲಲೀಲೆಗಳನ್ನು ವರ್ಣಿಸುತ್ತಾ "ಪರಿಪರಿ ಗಜುಂಗದಾಟ ಮಕ್ಕಳ ಸಂಗಡ ಗೆರೆಯ ದಾಟುವ ಆಟವು" ಎಂದು ಹೇಳಿ ಗಜುಂಗದಾಟದ ಒಂದು ಸೊಗಸಾದ ವರ್ಣನೆಯನ್ನು ಕೊಡುತ್ತಾರೆ. ಗಜುಂಗವ ನಾಡುತಲಿರ್ದನು ನಮ್ಮರಂಗ. ಒಂದನ್ನೇ ಹಾರಿಸಿದ ವೇಗದಿ ಮತ್ತೊಂದರಲಿ ತಾ ಒಡೆದ. ಒಂದೇ ಬಾರಿಗೆ ಎಲ್ಲ ಗಜುಂಗವ ಗೆಲಿದನು. ಬಚ್ಚಿಟ್ಟ ಗಜಂಗವ ಹುಡುಕೆಂದು ಅಚ್ಯುತ ನಗುತ ನಿಂದ. ಮುಂಚ್ಚಿಟ್ಟ ಗಜುಂಗವು ದೊರಕಲಿಲ್ಲವೋ ಒಂದು ಕಾಕಚ್ಚಿ ಕೊಂಡ್ಹೋಯ್ತು ಎನುತಲಿ ರಂಗ ಆಕಾಶವ ತೋರಿದ ಬೇಕಾದ ಗಜಂಗವ ನಿಮಗೆ ತರುವೆನೆಂದ.[4]

ಆಟಗಳಲ್ಲಿ ಹೆಣ್ಣುಮಕ್ಕಳಾಟ ಗಂಡುಮಕ್ಕಳಾಟ ಎಂಬ ವಿಂಗಡಣೆ ಬಹಳ ಹಿಂದಿನಿಂದಲೂ ಕಂಡುಬರುತ್ತಿದೆ. ದಾಸರು ಇಲ್ಲಿ ಹೇಳಿರುವ ಗಜ್ಜುಗದಾಟ ಹಾಗೂ ಗೆರೆದಾಟುವ ಆಟ (ಕುಂಟೆ ಬಿಲ್ಲೆ) ಹೆಣ್ಣುಮಕ್ಕಳು ಆಡುವ ಆಟಗಳಾದರೂ ಈ ಆಟಕ್ಕೆ ಹೆಣ್ಣುಮಕ್ಕಳೊಂದಿಗೆ ಸೇರಿಕೊಂಡೋ, ಬೇರೆಯಾಗಿಯೋ ಗಂಡುಮಕ್ಕಳೂ ಆಡುವ ರೂಢಿ ಮೊನ್ನೆ ಮೊನ್ನೆಯವರೆಗೂ ಇತ್ತು. ಈಗಲೂ ಹಳ್ಳಿಯಕಡೆ ಕೆಲವೆಡೆಗಳಲ್ಲಿ ಕಂಡು ಬಂದರೆ ಆಶ್ಚರ್ಯವೇನಿಲ್ಲ.

ಅಣ್ಣೆಕಲ್ಲಾಟ[5] (ತಿರಿಕಲ್ಲಾಟ), ಹೊನ್ನಗುಬ್ಬಿಯಾಟ,[6] ಹಿಡಿಗವಡೆಯಾಟ[7]–ಗಳು ಸ್ವಲ್ಪಮಟ್ಟಿಗೆ ಗಜ್ಜುಗದಾಟವನ್ನೇ

ಹೇಳುವ ಸಾಮಾನ್ಯವಾಗಿ ಹೆಣ್ಣುಮಕ್ಕಳಾಟಗಳು. ಹೆಣ್ಣು ಮಕ್ಕಳಾಟವನ್ನು ಕುರಿತು ಹೇಳುವ ಈ ಸಂದರ್ಭದಲ್ಲೇ ಅಟ್ಟುಗುಳಿ (ಗೊಟ್ಟುಗುಟಿ) ಮತ್ತು 'ಅಟ್ಟುಗೂಳಾಟ' ವನ್ನು ಕುರಿತು ಕೆಲವು ಮಾತುಗಳನ್ನು ಹೇಳಬಹುದು. ಈ ಆಟಗಳ ಹೆಸರು ರೂಢಿಯಲ್ಲಿ ಅಷ್ಟಾಗಿ ಕೇಳಿಬರುವುದಿಲ್ಲ. ಒಬ್ಬಿಬ್ಬರು ಕವಿಗಳು ಪ್ರಾಸಂಗಿಕವಾಗಿ ಇವುಗಳ ಹೆಸರನ್ನು ಹೇಳಿದ್ದಾರೆಯೇ ಹೊರತು ಹೆಚ್ಚು ವಿವರಣೆ ನೀಡಿಲ್ಲ.

'ಗೊಟ್ಟುಗುಟಿ' ಪದಕ್ಕೆ ವಿವರಣೆ ನೀಡುವಾಗ 'ಅಟ್ಟುಗುಳಿ ಆಟ' ಎಂದು ನಿಘಂಟು ವಿವರಣೆ ನೀಡಿ 'ಇದು ೧೪ ಗುಳಿಗಳುಳ್ಳ ಮಣೆಯನ್ನಿಟ್ಟುಕೊಂಡು ಆ ಗುಳಿಗಳಲ್ಲಿ ಹುಣಸೇಬೀಜ, ಕವಡೆ ಮೊದಲಾದುವನ್ನು ತುಂಬಿ ಆ ಕಾಳುಗಳನ್ನು ಎತ್ತಿ ಒಂದೊಂದಾಗಿ ಮುಂದಿನ ಗುಳಿಗಳಲ್ಲಿ ಹಾಕುತ್ತಾ ಆಡುವ ಆಟ' ಎಂದು ವ್ಯಾಖ್ಯಾನ ನೀಡಿ, ಈ ಆಟವನ್ನು 'ಹರಳು ಗುಣಿ ಮಣೆ ಆಟ' ಎಂದು ದಕ್ಷಿಣ ಕನ್ನಡದಲ್ಲೂ, 'ಚೆನ್ನಾಮಣಿ ಆಟ' ಎಂದು ಕರಾವಳಿ ಪ್ರದೇಶದಲ್ಲೂ ಕರೆಯುತ್ತಾರೆ ಎಂದು ಆ ಆಟದ ಪ್ರಾದೇಶಿಕ ವ್ಯಾಪ್ತಿಯನ್ನೂ ಹೇಳುತ್ತದೆ.[7] 'ಚೆನ್ನಮಣೆ ಆಟ' ಎಂಬುದು ಹಳೆ ಮೈಸೂರು ಪ್ರದೇಶಗಳಾದ ಹಾಸನ, ತುಮಕೂರು ಮುಂತಾದ ಕಡೆಗಳಲ್ಲಿ ರೂಢಿಯಲ್ಲಿರುವುದನ್ನು ಕೇಳಿದ್ದೇನೆ. ಆ ಆಟವನ್ನೂ ನೋಡಿದ್ದೇನೆ. ನಿಘಂಟಿನ ವಿವರಣೆ ಸ್ಪಷ್ಟ ವಾಗಿಯೇ ಇದೆ.

ಹೆಣ್ಣು ಮಕ್ಕಳು ಅಕ್ಕಿಬೇಳೆ ಮೊದಲಾದ ಪದಾರ್ಥಗಳನ್ನು ಸಂಗ್ರಹಿಸಿ ಅಡಿಗೆ ಮಾಡಿಕೊಂಡು ಊಟ ಮಾಡುವ ಆಟವೇ 'ಅಟ್ಟುಗೂಳಾಟ' (ಕ ಕ ನಿ, ೧–೧೧೮). ಆದರೆ ಇದನ್ನು ಒಂದು ಆಟವೆಂದು ಕರೆಯುವುದು ಕಷ್ಟ. ವನಭೋಜನ (ಪಿಕ್‌ನಿಕ್)

ಅಥವಾ ಸೌಕಟುಗಳ (ಕ್ಯಾಂಪ್ ಫೈರ್) ಸಂತೋಷಕೂಟದ ಮಾದರಿಯಲ್ಲಿ ಈ ಅಟ್ಟುಗೂಳಾಟವೂ ಒಂದು ಇರಬಹುದು. ರಾಮನಾಥಚರಿತದಲ್ಲಿ ಬರುವ 'ಕಾಲಭೈರವನ ಮಡದಿಯರಟ್ಟು ಗೂಳಾಟದ ತಾಣವೊ ಅಡವಿಯೋ' (ರಾ ಚ, ೨೭-೯೩) ಎಂಬ ವರ್ಣನೆ ಸ್ವಲ್ಪ ಇದೇ ರೀತಿಯ ಅರ್ಥವನ್ನು ಧ್ವನಿಪೂರ್ಣವಾಗಿ ಹೇಳುವಂತಿದೆ.

ಪಂಪ ಭಾರತದಲ್ಲಿ ಬರುವ 'ಗುಳ್ಳಿ ಗೊಟ್ಟ' (ಗುಳ್ಳಿಗೊಟ್ಟೆ ಬಟ್ಟುಳಿ ಸೆಂಡುಪೊಡೆಸೆಂಡೆಂಬಿವನಾಡುತ್ತೊಡವಳೆದರ್) (೨-೩೦) ಎಂಬ ಪದಕ್ಕೆ ನಿಘಂಟು (ಕ ಕ ನಿ ೩-೨೫೫ ೭೭) 'ಅಟ್ಟುಗುಳಿಯಾಟ' ಎಂದು ಅರ್ಥ ಕೊಡುತ್ತದೆ. ಆದರೆ ಈ ಆಟದ ಹೆಸರಿನ ಜೊತೆಯಲ್ಲೇ ಚೆಂಡಾಟದ ಹೆಸರೂ ಇದೆ. ಹೀಗಾಗಿ ಅಟ್ಟುಗುಳಿ ಆಟದ ಅರ್ಥವ್ಯಾಪ್ತಿ ವಿಶಾಲವಾಗಿದೆ ಎನಿಸುತ್ತದೆ.

### ಪಗಡೆ

ಪಗಡೆ ಚದುರಂಗದಾಟಗಳು ಬಹಳ ಹಿಂದಿನಿಂದ ಬಂದ ಜನಪ್ರಿಯ ಆಟಗಳಾದರೂ ಅವು ಒಂದು ರೀತಿಯಲ್ಲಿ ಜನರ ವ್ಯರ್ಥ ಕಾಲಹರಣಕ್ಕೆ ವಿತ್ತನಾಶಕ್ಕೆ ಎಡೆಗೊಟ್ಟು ಜೂಜಿನ ಮಟ್ಟಕ್ಕೆ ಒಯ್ದು ಅವರನ್ನು ಹಾಳುಮಾಡುತ್ತಿದ್ದವು ಎಂಬ ಭಾವನೆಗಳು ವ್ಯಕ್ತವಾಗಿವೆ. "ಲೆತ್ತ ಪಗಡೆ ಚದುರಂಗದಾಟದೊಳೆ ಹೊತ್ತುಗಳೆಯುತ್ತಿದ್ದೆ. ನಿತ್ಯ ನಿತ್ಯ ಈ ಪರಿ ಆಯುಷ್ಯವ ವ್ಯರ್ಥ ಕಳೆಯುತಲಿದ್ದೆ ಶೊಣ್ಯ.[8] ನೆತ್ತದ ಹಲಗೆ,[9] ಪಾಸಂಗಿ[10] ಇವು ಪಗಡೆಯ ಹಾಸನ್ನು ನೆನಪಿಸಿದರೆ, 'ನನ್ನ ಕಾಯನು ಹಣ್ಣುಮಾಡಿ ಮಲಗಿಸಿದನೊ[11]' ಎಂಬ ಪ್ರಯೋಗ ಪಗಡೆಯಾಟದಲ್ಲಿ ಇಂದಿಗೂ ಉಳಿದಿರುವ ಪರಿಭಾಷೆಯನ್ನು ಸೂಚಿಸುತ್ತದೆ. ಹಾಗೆಯೇ ಪಗಡೆ

ಯಾಟಕ್ಕೆ ಸಂಬಂಧಿಸಿದಂತೆ ಆಟಗಾರರು ತಮಗೆ ಗೆಲುವು ದೊರೆಯು ಲೆಂದು ಹಲವಾರು ದೇವತೆಗಳಿಗೆ ಮಾಡಿಕೊಳ್ಳುವ ಹರಕೆ.[12] ಆಟ ನಡೆಯುತ್ತಿರುವಾಗ ಸ್ಫೂರ್ತಿಗೊಂಡು 'ದುಗನ ಹಾಯಿಕು ತನಗೆ ಹಾಯ್ಕಿತ್ತಿಗನವೆಂಬಬ್ಬರದ ಹಾಸಂಗಿಗಳಬೊಬ್ಬೆಯು ಸಾರಿಗಳು[13]' ನಾನಾ ಬಣ್ಣದ ಕಾಯಿಗಳನ್ನು ಯೋಚಿಸಿ ನಡೆಸುತ್ತಾ ಹಣ್ಣು ಮಾಡುವ ಜಾಣ್ಮೆ—ಇವುಗಳೊಂದೊಂದರ ಚಿತ್ರವೂ ನಮ್ಮ ಕಣ್ಣುಮುಂದೆ ನಿಲ್ಲುತ್ತದೆ.[14]

ಪಗಡೆಯಾಟದಲ್ಲಿ ಬರುವ ಚೌಕ, ದುಚೌಕ, ಚೌಕಾದಾಯ, ಚೌಕದುಗ, ಚೌಪಂಚಿ—ಎಂಬ ಪಾರಿಭಾಷಿಕ ಶಬ್ದಗಳನ್ನು ಕನ್ನಡ ಕಾವ್ಯಗಳಲ್ಲಿ ಗುರುತಿಸಬಹುದು. ಕೆಲವು ಶಬ್ದಗಳು ಪಗಡೆ ಯಾಟದ ವರ್ಣನೆಯ ಸಂದರ್ಭದಲ್ಲಿ ಬಂದಿದ್ದರೆ, ಮತ್ತೆ ಕೆಲವು ಪ್ರಾಸಂಗಿಕವಾಗಿ ಬಂದಿವೆ ;

'ಬೇಡ ಚೌಕದಮಾತು ನಿನಗೆಂದಾಡುವಂದಾ ಚೌಕಾದಾಯುವ ನಾಡುವನು' (ಬಸಪು, ೪೩–೬) ; 'ಪದಮಂ ಮೋಕ್ಷ ಚತು ಷ್ಟಯಮುಂ ಬಯಸದೆ ದುಂಚೌಕವನಾಡುವ (ನೆತ್ತದಾಟದಲ್ಲಿ ನಾಲ್ಕರ ಎರಡುಗರ) ತನಿಸೊಕದೊದವಂ ಮುಂದುಮನೆರಳ್ಕೆಯ್ಯಂ ದಿತ್ತಿದ್ದುಗವಾಡುವನು' (ಉದ್ಭದೇ, ೨೫–೧೩) ; 'ಆಡುವನು ತಾಂ ಚೌಕದುಗವಂ ಚೌಕದುಗಕಿಕ್ಕಿ' (ಬಸಪು. ೪೩–೬) ; 'ಚೌಕ ದುಗಮುಂಚೌಪಂಚಿಬಾಯೆಂದು ಕರೆಯುತ್ತೆಲೆತ್ತಮನಲಂಪಚಿತ್ತು ತಾವಾಡಿದರ್' (ಉದ್ಭದೇ, ೧೧–೧೪ ನೋಡಿ. ಅದೇ, ೩–೧೨). ಪುಣ್ಯಾಸ್ರವದಲ್ಲಿ ಬರುವ ಈ ವರ್ಣನೆ ಪಗಡೆಯಾಟದ ಚಿತ್ರವನ್ನು ನೀಡುತ್ತದೆ. "ಸಾರಿಗಳಂ ಪರಾಕರಿಸಿ ಸುಂಕಿಗನಂತಿರೆಹೊಡಿ ರೇಖೆಯಂ ಚೌಕದುಗ ನಿದುಂಗ ನಿದ್ದುಗ ನಿತ್ತಿಗನೆಂಬ ದಾಯಂ ಪೋರಿಸಿ ಬೇಡಿದದಾಳಮುಳವಟ್ಟಿರೆ" (ಪುಣ್ಯಾಸ್ರ, ೪–೧೮).

ಆಟಗಾರರು ಆಡುತ್ತಿರುವಾಗ ಆಟದಲ್ಲಿ ಗೆಲ್ಲಲು, ಒಂದು ಚೌಕವೋ, ಚೌಪಂಚಿಯೋ ಬೇಕಾಗಿರುತ್ತದೆ. ಆಗ ಕೈಯಲ್ಲಿ ದಾಳ ಹಿಡಿದು ಮನದಲ್ಲಿ ತಾವು ಅಪೇಕ್ಷಿಸಿದ್ದೇ ಬೀಳಲೆಂದು ಬಾಯಲ್ಲಿ ಮತ್ತೆ ಮತ್ತೆ ಹೇಳಿಕೊಳ್ಳುತ್ತಾ ದಾಳವನ್ನು ಉರುಳಿ ಸುತ್ತಿರುತ್ತಾರೆ. ಅಂತಹ ಒಂದು ನವುರಾದ ಚಿತ್ರವನ್ನು ಒಬ್ಬ ಕವಿ ಇಲ್ಲಿ ಕೊಟ್ಟಿದ್ದಾನೆ: "ಇರ್ದುಗವಮುಮಂ ಚೌಪಂಚಿಯಿರ್ಪುಮಂ ಚಿಯಿತ್ತಿಗೆದೊಳದ್ರಿಕೆ ಕಚ್ಚೆ ಚೌಕದುಗವಮಂ ಚೌಪಂಚಿಬಾಯೆಂದು ಕರೆಯುತ್ತೆ ಲೆತ್ತವಮನಲಂಪಬೆತ್ತು ತಾವಾಡಿದರ್" (ಉದ್ಭದೇ. ೩–೧೨, ೧೧–೧೪) 'ದಶಕುಮಾರ ಚರಿತೆ'ಯಲ್ಲಿ (೮–೯೨) ಹತ್ತುವಿಧವಾದ ನೆತ್ತವನಾಡುವೆನೆಂದು ಕೆರಳಿಸಿದ ಪ್ರಸಂಗ ಒಂದು ಬರುತ್ತದೆ: "ಆರಿದಿರಾದೊಡಾಡಿದ ಪೆನೆಕ್ಕಡಿಯಂಪಡೆ ಪಂಚ ಬಾಯುಮಂ ವೀರ ವಿಳಾಸಮಂ ತಗರಸನ್ನೆಯನ್ನೈದರಡಂ ನೆಗಟ್ವಿ ಚೌಸಾರಿಯನಾಱು ಪನ್ನೆರಡನೊಪ್ಪುವ ರಾಜಕುಮಾರನಂ ಮಹೋದಾರವನೊಡ್ಡಿ ದೊಡ್ಡನೆನುತೆನ್ನನವಂ ಕಡುಪಿಂ ಕೆರಳ್ಚಿದಂ ಇವು ಮೊದಲಾಗಿ ಪತ್ತು ವಿಧದ ನೆತ್ತವನಾಡುವೆನೆಂದನ್ನಂ ಕೆರಳ್ಚಲ್" (ತಗರಸನ್ನೆ = ಹತ್ತು ಬಗೆಯ ಲೆತ್ತದ ಆಟಗಳಲ್ಲಿ ಒಂದು).

ಆಟದಲ್ಲಿ ಯಾವುದು ಮೇಲು ಯಾವುದು ಕೀಳು ಎಂಬುದನ್ನು ಅಳೆಯುವುದು ಕಷ್ಟವಾದರೂ ರತ್ನಾಕರನು 'ಚದುರಂಗ' ಹಾಗೂ 'ಟೊಳ್ಳುಗವಡೆ' ಆಟಗಳನ್ನು ತನ್ನದೇ ಆದ ರೀತಿಯಲ್ಲಿ ವಿಮರ್ಶಿಸಿದ್ದಾನೆ; 'ಜಾಣಜಾಣೆಯರ ಆಟವೆಂಬುದು ಚದುರಂಗ ದಾಟದಂತಿಹುದು.[15] ಬದಗರ (ನೀಚ) ಲೀಲೆಯುಹುದು ಟೊಳ್ಳು ಗವಡೆಯಿಗೆದರ್ವ ಸೋಗಳೆಯಾಟದಂತೆ'[15ಅ] (ಪಾಠಾಂತರ– ಸೋರ್ಮುಳಿ). ಲೆತ್ತ ಚೆದುರಂಗದಾಟಗಳು ರಾಜರಿಗೆ ಬಹು

ಪ್ರಿಯುವಾದ ಆಟಗಳಾಗಿದ್ದವು.[16] 'ಲೆತ್ತಪಗಡೆಯು ಬಲುಂಜೂದಿ ನಿಂದ....ಪೊತ್ತುಗಳಿದನಾ ರಾಜಕುಮಾರ' ಎಂದುಂ ಕುಮಾರ ರಾಮನಾಥನು ಹೊತ್ತುಕಳೆಯುತ್ತಿದ್ದ ನಾನಾ ರೀತಿಯನ್ನು ಹೇಳುತ್ತಾ ಕವಿ ವರ್ಣಿಸುತ್ತಾನೆ.[17]

**ಜೂಜಿನಾಟಗಳು**

ಜೂಜಾಟದ ಇತಿಹಾಸ ಬಹು ಪ್ರಾಚೀನ. ಮಹಾಭಾರತದ ರುಂದ್ರನಾಟಕಕ್ಕೆ ಪಗಡೆಯುಂ ಜೂಜೆ ಒಂದು ರೀತಿಯಲ್ಲಿ ನಾಂದಿ ಯಾಯಿತುಂ. ಅಂದಿನಿಂದ ಇಂದಿನವರೆಗೂ ಅದರ ಬಣ್ಣ ಕುಂದಿಲ್ಲ. ಜೂಜಾಟದ ಬಗೆಗೆ ನಮ್ಮ ಕವಿಗಳು ಹತ್ತಾರುಂ ಚಿತ್ರಗಳನ್ನು ನೀಡುತ್ತಾರೆ. ಜೂಜಿನ ಕೆಡಕುಗಳ ಬಗೆಗೂ ಕವಿಗಳು ಎಚ್ಚರಿಸಿ ದ್ದಾರೆ : " ಜೂಜುಂ ಬೇಂಟೆಯುಂ ಕಳ್ಳುಂ...ಕಳವುಮೆಂಬ ಸಪ್ತ ವ್ಯಸನಗಳಂ ಪೊರ್ದದೆ ಇಪ್ಪುದು' (ಧರ್ಮಾಮೃ. ೧೫-೧೨೫). ಎಂದು ಒಬ್ಬ ಕವಿ ಎಚ್ಚರಿಸಿದರೆ, ಕನಕದಾಸರು ಈ ಜೂಜು ಗಾರರನ್ನು ವಿತ್ತನಾಶಮಾಡುವ ಜೂಜುಂಗಾರರೆಂದು ಕರೆದು ಅವರು ಮನೆಮನೆಗಳಲ್ಲೂ ಇದ್ದರೆಂದು ಹೇಳುವರು (ಮೋತ, ೨೦-೨೫). ಜೂಜಾಟಕ್ಕೆ ಇಂತಹ ಸ್ಥಳವೇ ಆಗಬೇಕೆಂದಿಲ್ಲ. 'ನಗರಾಭ್ಯಂತರ ದೇವತಾಭವನದೊಳ್, ಜೂದಿನದಿಂಡೆಯೊಳ್ ನೀತಿಗೆಟ್ಟಾಡುವರ್' ಎಂದು ಒಬ್ಬ ಕವಿ ಈ ಜೂಜುಕೋರರುಂ ದೇವಮಂದಿರವನ್ನೂ ಕೂಡ ಬಿಡದೆ ಅಲ್ಲಿಯೂ ನೀತಿಗೆಟ್ಟಾಡು ತ್ತಿದ್ದರು ಎಂದು ನೋವಿನಿಂದ ನುಡಿದಿದ್ದಾನೆ. (ಕುಸುಮಾ. ೨-೭) (ಈ ಮಾತು ಇಂದಿಗೂ ಸತ್ಯ ಎಂಬುದಕ್ಕೆ ರಕ್ಷಕರಿಲ್ಲದ ಪಾಳು ದೇಗುಲಗಳಲ್ಲಿ ಜೂಜುಕೋರರು ಸೇರುವುದನ್ನು ಕಾಣಬಹುದುಂ).

ಜೂಜುಂಗಾರರ ಕಾರ್ಯಕ್ಷೇತ್ರ ದೇಶೋ ವಿಶಾಲವಾಗಿತ್ತು ಎಂಬುಂ

ದಕ್ಕೆ ದಂಡಯಾತ್ರೆಯ ಸಮಯದಲ್ಲಿ ಸೇನೆಯ ಜೊತೆಯಲ್ಲಿ ತೆರಳುತ್ತಿದ್ದ ನಾನಾ ವೃತ್ತಿಯ ಜನರ ಜೊತೆಯಲ್ಲಿ 'ಜೂಜು ಗಾರರು' ಇದ್ದರೆಂಬ ಕವಿಯ ವರ್ಣನೆಯೇ ಸಾಕ್ಷಿ. 'ಬಿಸಿನೀರ ಕೇಣಿಗರ್ ಜೂಜುಗಾಜಿರ್ ಮುಖ್ಯರೊದಗಿ ಬರುತಿರ್ದರ್' (ಚೆಬಪು. ೪೭-೪೦).

ಇನ್ನು ಈ ಜೂಜುಗಾರರ ಸ್ವಭಾವವೂ ? ಅಲ್ಲಿ ಮಾನವೀ ಯತೆ ಕ್ಷಮಾಗುಣಗಳಿಗೆ ಎಡೆಯುಂಟೆ ? ಆಟದ ಮಧ್ಯದಲ್ಲಿ ಆಗುತ್ತಿದ್ದ ಅನಾಹುತಗಳು ಯಾವ ಸ್ವರೂಪದಲ್ಲಿ ಇರುತ್ತಿದ್ದ ವೆಂಬುದಕ್ಕೆ ಒಬ್ಬ ಕವಿ ಕೊಡುವ 'ಕಳೆದ ಪಲ್ಗಳ ಕವಡೆಯ ಗುಂಪೆಯುಮಾಡಿ ಆಡುವ ಜೂಜುಂಗಾಱ ಮರುಳ್ಗಳ ಬಳಗವಲ್ಲಿ ಯೊಪ್ಪಿದುದು' (ನೇಮಿಸಂ, ೮-೫೩) ಎಂಬ ಅರ್ಥಗರ್ಭಿತ ವರ್ಣನೆಯೇ ಸಾಕ್ಷಿ !

ಕನಕದಾಸರ 'ಮೋಹನ ತರಂಗಿಣಿ'ಯಲ್ಲಿ ನಾನಾ ವಿಧವಾದ ಜೂಜಿನಾಟಗಳ ಒಂದು ಸುರಮ್ಯಚಿತ್ರ ದೊರೆಯುತ್ತದೆ. ವಿಜಯ ನಗರದಲ್ಲಿ ವಿವಿಧ ರೀತಿಯ ಜೂಜಿನಾಟಗಳು ಪ್ರಚಾರದಲ್ಲಿದ್ದವು. ಅವುಗಳಲ್ಲಿ ಬಾಳೆಯಹಣ್ಣಿನ ಜೂಜು, ತೆಂಗಿನಕಾಯಿ ಜೂಜು, ಕಬ್ಬಿನ ಜೂಜು ಮುಂತಾದ ಜೂಜುಗಳನ್ನು ಕನಕದಾಸರು ಬಾಣಾ ಸುರನ ಶೋಣಿತಪುರದ ವರ್ಣನೆಯ ಸಂದರ್ಭದಲ್ಲಿ ಹೇಳಿರು ವರು.[18] 'ಕುಂದಣ ನವರತ್ನಖಚಿತ ಚೌಭಾರಿಯ (ಚೌಕನೆಯ ಹಲಗೆ) ಮುಂದಣ ನಾಲ್ದೆಸೆಗಳಲಿ ಛಪ್ಪನ್ನದೇಶದ ಜನವೃಂದ ಜೂದಿನ ವಿಷಯಂದಲ್ಲಿ ಸಂದಣಿಸಿದುದೊಂದೇ ಅಲ್ಲದೆ'[19] ಲೆತ್ತ, ಪಗಡೆ, ರಾಯಬೊಗರಿ, ಸೊಲ್ಲೆಹ, ಬಾರುಗುಂತ್ತ, ಒಪ್ಪಿ, ಸರಿಬೆಸ —ಮೊದಲಾದ ಜೂಜಿನಾಟಗಳನ್ನಾಡಿ ವಿತ್ತನಾಶಮಾಡುವ ಜೂಜುಗಾರರು ಮನೆ ಮನೆಗೂ ಇದ್ದರು.[20] ಕನಕದಾಸರು ತಮ್ಮ

ಪುರವರ್ಣನೆಯನ್ನು ಮುಂದುವರೆಸುತ್ತ, ರಾಜಬೀದಿಗಳಲ್ಲಿ ಜನರು ಹೇಗೆ ನಾನಾ ರೀತಿಯ ವ್ಯವಹಾರಗಳಲ್ಲಿ ತೊಡಗಿರುತ್ತಿದ್ದರೆಂದು ಹೇಳುವರು ;

"ಜೂಜಾಟಿಕೆ ಸೂಳೆಬಂಟಿಕೆ ರಣದ ಸಂವಾಜ ಪೆರ್ಗುಡಿಗಳ ಚರ್ಚೆ । ರಾಜವೀಧಿಯೊಳಿಱಿದಾಡುವ ಸಂದಣಿ । ಮಾಜದು ನಿತ್ಯಕೃತ್ಯದಲಿ."[21]

ನಾರಣಪ್ಪ ಕೊಡುವ ಒಂದು ವರ್ಣನೆಯಲ್ಲಿ ರಾಜಸಭೆಗಳು ಕೂಡ 'ಜೂಜಾಳಿಗಳಿಂದ' ಕೂಡಿ, ಇತರ ಕಲಾವಿದರ ಜೊತೆಯಲ್ಲಿ ಅವರು ಸಭೆಯನ್ನು ಅಲಂಕರಿಸುತ್ತಿದ್ದರೆಂಬ ಕುತೂಹಲದ ವಿಷಯ ತಿಳಿದುಬರುತ್ತದೆ. (ಗಭಾ ಉ ೨-೨೭)

**ಕುಮಾರವ್ಯಾಸ ಹೇಳಿರುವ ಆಟಗಳು**

ಕುಮಾರವ್ಯಾಸನು ಕೌರವ ಪಾಂಡವರ ಬಾಲ್ಯವನ್ನು ವರ್ಣಿಸುತ್ತ ಆದಿಪರ್ವದ ಆರನೆ ಸಂಧಿಯಲ್ಲಿ (ಪದ್ಯ ೧, ೨) ಹೇಳಿರುವ ವಿವಿಧ ಆಟಗಳನ್ನು ನೋಡಿದರೆ ಅವುಗಳಲ್ಲಿ ಬಹುಮಟ್ಟಿನವು ಇಂದಿಗೂ ಜನಪ್ರಿಯವಾದ ಆಟಗಳೆಂಬುದನ್ನು ಕಾಣಬಹುದು. ಆ ಆಟಗಳು ಇವು :

ಆಳಿನಮೇಲೆ ಆಳೇರಿಕೂತು ಆಡುವ 'ಅಂಡೋಲ್' 'ಪಂಡೋಲ್' ಆಟದಂತಹ 'ಆಳಿನೇರಿಕೆ'; ಕೈಯಲ್ಲಿ ಕವಡೆ ಹಿಡಿದು ಆಡುವ ಸರಿಬೆಸದ ಆಟ 'ಹಿಡಿಗವಡೆ'[22]; ಒಬ್ಬರನ್ನೊಬ್ಬರು ಚೆಂಡಿನಿಂದ ಗುರಿಯಿಟ್ಟು ಹೊಡೆಯುವ 'ಗುರಿಯಾಳು[22ಅ] ಚಂಡಿನ ಹೂಣಿಕೆ'; (ಪೊಣರ್ಕೆ) 'ಚಿಣಿಕೋಲು'[23]; ದಂಡ ಅಥವಾ ಸಾಮು ತೆಗೆಯುವ 'ದಂಡೆಯ'; ಗೆಂಡುಗುಂಡು ಎಂದು ಕೂಗುತ್ತ ಆಡುವ ಆಟ 'ಗುಡಂಗು' (ಈಗಿನ ಕಬಡ್ಡಿ ಆಟದ ತರಹ ಇರಬಹುದು); ಚೆಂಡನ್ನು

ಗಂಟ್ಟಾಗಿಟ್ಟು ಆಡುವ ಆಟ 'ಗುತ್ತಿನ ಚೆಂಡು; ಒಬ್ಬರು ಅಡಗಿಸಿಟ್ಟ ಚೆಂಡನ್ನು ಇನ್ನೊಬ್ಬರು ಹುಡುಕುವ 'ಗುಮ್ಮನ ಬಡಿವ ಕತ್ತಲೆ ಗುದ್ದು[23ಅ]; ಕಂಬ ಕಂಬವನ್ನು ಮುಟ್ಟಿ ಆಡುವ 'ಕಂಬದಗಡಣೆ'[23ಆ]; 'ಕಣ್ಣುಮುಚ್ಚಾಲೆ'; ಅಸಗವರಿ(?); ಹಂಚಿನ ಬಿಲ್ಲೆಯನ್ನು ಕುಂಟುತ್ತಾ ಮನೆಮನೆಗೆ ಸಾಗಿಸುವ 'ಹಲ್ಲೆಯಾಟ'; 'ಕೋಲುಮರನಾಟ' (ಗಿಡಮಂಗನಾಟ); 'ಹರಿಹಲಗೆ' (?) 'ನಿಡುಗವಣೆ'; 'ಕೆಡುಹು ಕುಟ್ಟಿಗ' (ಕುಸ್ತಿ ?); 'ಚಿಟ್ಟುಮುರಿಯಾಟ'[24]; 'ಹಿಡಿಬುಗುರಿ'[25]— ಕುಮಾರವ್ಯಾಸ ಮೇಲೆ ಹೇಳಿರುವ ಸುಮಾರು ೧೮ ಆಟಗಳನ್ನು ಕುರಿತ ವಿವರಣೆಯನ್ನು, ಎನ್ಕೆ ಅವರ ಕುಮಾರವ್ಯಾಸ ನಿಘಂಟಿನಿಂದ ತೆಗೆದುಕೊಂಡಿದ್ದೇನೆ (ಕುನಿ, ೧೪೫-೬).

ಪಾಂಡವರು ಈ ಆಟಗಳನ್ನು ಆಡಿದ್ದರೋ ಇಲ್ಲವೋ ಇಲ್ಲಿ ಅದು ಮುಖ್ಯವಲ್ಲ. ತನ್ನ ಕಾಲದಲ್ಲಿ ಮಕ್ಕಳ ವಿವಿಧ ಆಟಗಳು ಕವಿಯ ಮನಸ್ಸನ್ನು ಸೂರೆಗೊಂಡಿರಬೇಕು. ಆಗಲೇ ಇಂತಹ ಸಹಜ ಸುಂದರ ಚಿತ್ರಗಳು ಮೂಡಿಬರಲು ಸಾಧ್ಯ.

### ಚೆಂಡಾಟ

ನಂಜುಂಡ ಕವಿಯು ಶೂಲದ ಹಬ್ಬದ ಸಂದರ್ಭದಲ್ಲಿ ಕುಮಾರ ರಾಮನು ಅವನ ಸಂಗಡಿಗರು ಆಡಿದ ಚೆಂಡಾಟವನ್ನು ವರ್ಣಿಸಲು 'ಚೆಂಡಾಟ' ಎಂಬ ಒಂದು ಇಡೀ ಪ್ರಕರಣವನ್ನೇ ಮೀಸಲಾಗಿರಿಸಿದ್ದಾನೆ.[26] ಆಟವನ್ನು ನೋಡಲು ಮಾಳಿಗೆ, ಕುಸರ, ಚಪ್ಪರ, ಮನೆ ಮಾಡಗಳ ಮೇಲೆಲ್ಲಾ ನೆರೆದ ಕ್ರೀಡಾವಿನೋದಿಗಳು; ಅವರ ಅಮಿತೋತ್ಸಾಹ[27]; ಆಡುವಚೆಂಡು ಲಗ್ಗೆವಲ್ಲೆಗಳ ತಂದಿಳುಪಲು ಇದ್ದ ಊಳಿಗದ ಬೋಳಿಕರು (ಸೇವಕರು)[28]—

ಇವೇ ಮುಂತಾದುವುಗಳನ್ನು ಕುರಿತ ವರ್ಣನೆ ಆ ಆಟದ ನೈಜ ಚಿತ್ರವನ್ನು ಮೂಡಿಸುತ್ತದೆ. ಕೆಲವು ಆಟಗಳ ಅಂತಸ್ತಿನ ಪ್ರಶ್ನೆಯನ್ನು ಕವಿ, ಚೆಂಡು ಕೇಳಲು ಬಂದ ರಾಮನಿಗೆ ಹರಿಯಲಾದೇವಿ ಹಾಕುವ ಪ್ರಶ್ನೆಗಳ ಮೂಲಕ ಎತ್ತಿದ್ದಾನೆ : "ಬೊಗರಿ ಗದುಂಗು (?) ಸಡುಂಗುಂಡು (?) ಲಗ್ಗೆ ಹಿಡಿಗವಡೆಗಳಿವು ರಾಜಪುತ್ರರಿಗೆ ಬಗೆಯಲುಂಚಿತವೆ ಕೇಳಿದ ಪಗೆರಾಯರು ನಗರೆ...ಚೆಂಡಾಟವೆಂಬುದಂ ತುಱುಗಾಹಿ ಮಕ್ಕಳ ತಂಡಕಲ್ಲದೆ ನೃಪಸುತರ ಮಂಡಳಿಗುಚಿತವೆ ಸಲ್ಲದು ಗಂಡರಗಂಡಬೇಡೀ ಚೆಂಡಾಟ".[29] ಆಕೆಯ ಮಾತಿನ ಅರ್ಥವನ್ನು ಹೀಗೆ ಗ್ರಹಿಸಬಹುದು; ಚೆಂಡು ಬುಗುರಿ ಮುಂತಾದ ಈ ಕ್ರೀಡೆಗಳೆಲ್ಲ ಸಾಮಾನ್ಯವಾಗಿ ಹಳ್ಳಿಗಳಲ್ಲಿ ನಗರಗಳಲ್ಲಿ ಜನ ಸಾಮಾನ್ಯರು ಆಡುವ ಆಟಗಳು. ರಾಜಮನೆತನದವರು ಅವನ್ನು ಅಷ್ಟಾಗಿ ಆಡತಕ್ಕವಲ್ಲ.[30]

ಇದುವರೆಗೆ ನಾವು ಪರಿಶೀಲಿಸಿದ ಮನೆಯೊಳಗಣ ಆಟಗಳು ಹಾಗೂ ಬಾಲಕರ ಕ್ರೀಡೆಗಳು ಬಹುಮಟ್ಟಿಗೆ ವ್ಯಕ್ತಿಗಳೇ ಆ ಕ್ರೀಡೆಗಳಲ್ಲಿ ಸ್ವತಃ ಸಕ್ರಿಯವಾಗಿ ಪಾಲುಗೊಂಡು ಮನೋಲ್ಲಾಸ ಪಡೆಯುವಂತಹವು. ಇವು ಒಂದು ರೀತಿಯ ಕ್ರೀಡೆಗಳಾದರೆ ಮತ್ತೊಂದು ರೀತಿಯವು ಪ್ರದರ್ಶನ ಕ್ರೀಡೆಗಳು. ಎಂದರೆ ಇತರರು ತೋರುವ ಆಟ ಅಥವ ಪ್ರದರ್ಶನಗಳನ್ನು ನೋಡಿ ಮನೋರಂಜನೆ ಪಡೆಯುವಂತಹವು. ಇವುಗಳನ್ನು ವಿನೋದ ಪ್ರದರ್ಶನಗಳೆಂದೂ ಕರೆಯಬಹುದು. ಇದರಲ್ಲಿ ಮನೋರಂಜನೆ ಪಡೆಯುವವರು ಪ್ರೇಕ್ಷಕರಷ್ಟೆ !

## ಮನೋರಂಜನಾ ಪ್ರದರ್ಶನಗಳು

ಜಾತ್ರೆ, ರಥೋತ್ಸವ, ಹಬ್ಬಹರಿದಿನಗಳು, ಸುಗ್ಗಿ–ಮುಂತಾದ

ಸಂದರ್ಭಗಳಲ್ಲಿ ಜನರ ಪರಿಷೆ ಸೇರಿದಾಗ ಅವರನ್ನು ವಿನೋದ ಗೊಳಿಸಲು ಹರಿಕಥೆ, ಭಜನೆ, ಕೋಲಾಟ, ಯಕ್ಷಗಾನ, ಗಾರುಡಿ– ಮುಂತಾದ ನಾನಾ ರೀತಿಯ ಪ್ರದರ್ಶನಗಳು ಏರ್ಪಡುವುವು. ಹಾಗೆಯೇ ಅರಮನೆಗಳಲ್ಲಿ ಪುತ್ರೋತ್ಸವ, ನಾಮಕರಣ, ವಿವಾಹ, ಪಟ್ಟಾಭಿಷೇಕ, ವರ್ಧಂತಿ, ಹಬ್ಬಹರಿದಿನಗಳು, ಗಣ್ಯವ್ಯಕ್ತಿಗಳ ಆಗಮನ ಮುಂತಾದ ಸಂದರ್ಭಗಳಲ್ಲಿ ಕೆಲವು ವಿಶೇಷ ಮನೋ ರಂಜನಾ ಪ್ರದರ್ಶನಗಳು ನಡೆಯುವುವು. ಈ ಪದ್ಧತಿ ಅರಮನೆ ಗಳಲ್ಲಿ ಹಿಂದೆಯೂ ಇತ್ತು. ರಾಜತ್ವ ಹೋದರೂ ಇಂದಿಗೂ ಬೇರೆ ಬೇರೆ ರೀತಿಗಳಲ್ಲಿ ಬೇರೆ ಬೇರೆ ಸಂದರ್ಭಗಳಲ್ಲಿ ಅವು ಕಾಣಿಸಿ ಕೊಳ್ಳುತ್ತಿವೆ.

ವಿನೋದಕ್ಕಾಗಿ ಜನರು ಏರ್ಪಡಿಸುವ ಸಾರ್ವಜನಿಕ ಪ್ರದರ್ಶನ ಗಳೇ ಆಗಲಿ, ರಾಜರು ಅರಮನೆಗಳಲ್ಲಿ ಏರ್ಪಡಿಸುವ ವಿಶೇಷ ಪ್ರದರ್ಶನಗಳೇ ಆಗಲಿ ಅವುಗಳನ್ನು ಮುಖ್ಯವಾಗಿ ಮಲ್ಲಯುದ್ಧ, ಕತ್ತಿವರಸೆ, ಮೃಗಗಳ ಕಾಳಗ ಮುಂತಾದ ದೈಹಿಕ ಅಥವಾ ಪೌರುಷ ಪ್ರದರ್ಶನಗಳೆಂದೂ, ಸಂಗೀತ, ಸಾಹಿತ್ಯ, ನೃತ್ಯ, ಇಂದ್ರಜಾಲ, ಮಹೇಂದ್ರಜಾಲ ಬೆಂಕಿ ಪ್ರದರ್ಶನ–ಮುಂತಾದ ಸೌಮ್ಯ ಸ್ವರೂಪದ ಕಲಾಪ್ರದರ್ಶನಗಳೆಂದೂ ವರ್ಗೀಕರಿಸಬಹುದು.[31] ಮೊದಲನೆಯ ವರ್ಗದವು ಕಲೆಯ ಬಳಗಕ್ಕೆ ಸೇರಿದವುಗಳಾದರೂ ಅವುಗಳು ರೌದ್ರ, ಭೀಕರ, ಭಯಾನಕ ಸ್ವರೂಪದವುಗಳು. ಇಂತ ಹವುಗಳನ್ನು ನೋಡಲು ಮನಸ್ಸು ಒಗ್ಗದವರೂ ಇದ್ದಾರೆ.

ಗಣ್ಯವ್ಯಕ್ತಿಗಳನ್ನು ರಾಜರು ಅರಮನೆಗೆ ಬರಮಾಡಿಕೊಂಡಾಗ ಅವರಿಗೆ ವೈಭವದ ಸ್ವಾಗತನೀಡಿ ಮುಂದೆ ಆಹ್ವಾನಿತ ಶ್ರೋತೃಗಳ ಸಮ್ಮುಖದಲ್ಲಿ ಏರ್ಪಡಿಸುತ್ತಿದ್ದ ಮನೋರಂಜನಾ ಪ್ರದರ್ಶನ ಗಳನ್ನು ಕವಿಗಳು ಅಲ್ಲಲ್ಲೆ ಕೊಟ್ಟಿದ್ದಾರೆ. ಆ ಪ್ರದರ್ಶನಗಳ

ವರ್ಣನೆಯನ್ನು ಗಮನಿಸಿದಾಗ ಆಗಿನ ಕಾಲದಲ್ಲಿ ರೂಢಿಯಲ್ಲಿದ್ದ ಅನೇಕ ಕ್ರೀಡೆಗಳ ಪರಿಚಯುವಾಗುತ್ತದೆ. ಉದಾಹರಣೆಗೆ 'ಚೇರಮಕಾವ್ಯ'ದಲ್ಲಿ ಬರುವ ಚೇರಮ ಮಹೇಶ್ವರ ನಂಬಿಯಣ್ಣನ ಚಿತ್ತಕ್ಕೆ ಹರುಷವನ್ನುಂಟುಮಾಡಲು ಏರ್ಪಡಿಸಿದ ಮನೋರಂಜನೆಯ ಕಾರ್ಯಕ್ರಮವನ್ನು ನೋಡಬಹುದು.

"ಊಡಿಸುತೆ ಷಡುರಸಾನ್ನವನಭವ ಭಕ್ತರ್ಗೆ । ಯಾಡಿಸುತೆ ನಾಟ್ಯಮಂ ರಸವೊಸರ್ವಗೀತಮಂ । ಪಾಡಿಸುತಲಾವಗಂ ಮಲ್ಲ ಕುಕ್ಕುಟ ಮಹಿಷ ಮೇಷಾದಿ ಯುದ್ಧಂಗಳ । ಮಾಡಿಸುತ ವಿವಿಧ ವಾದ್ಯಂಗಳೆಯ್ತುರೆ ಕೂಡೆ । ನೋಡಿಸುತೆ ದಿನದಿನಕೆ ಹರುಷಮಂ ಚಿತ್ತಕ್ಕೆ । ಮೂಡಿಸುತ ಚೇರಮಂನಂಬಿಯಿದಿರೊಳಗಿರಲು..." (ಚೇರಮ 11-23).

ಕೇವಲ ಅತಿಥಿಗಳು ಬಂದಾಗ ಮಾತ್ರವೇ ಅಲ್ಲದೆ ರಾಜರು ತಮಗೆ ಬೇಸರವಾದಾಗ ಹೊತ್ತುಗಳೆಯಲುಕೂಡ ಇಂತಹ ಪ್ರದರ್ಶನಗಳನ್ನು ನೋಡುತ್ತಿದ್ದರು. ಕುಮಾರರಾಮನು ಹೊತ್ತು ಕಳೆಯುತ್ತಿದ್ದ ರೀತಿಯನ್ನು ಕವಿ ವರ್ಣಿಸಿರುವ ರೀತಿ ಇದು:

"ಬಳಿಕ ಮಹಿಷಮದಗಜಮಲ್ಲರ । ಕಲಹದಿಂನೆತ್ತಪಗಡೆಯ । ಬಲುಜೂದಿನಿಂದ ವಿದ್ಯಾಗೋಷ್ಠಿಯಿಂಪೊತ್ತು । ಗಳೆದನಾ ರಾಜಕುಮಾರ ಕರಿತುರಗಗಳೇಱಾಟದಿಂ ಬಂಟರ । ಬಿರುದಿನಪಂಥ ವಾತಿಂದ । ಗರುಡಿಯೋಜರ ಪರಿವಿಡಿ ಮಾತುಗಳಿಂದ ಪರಿಹರಿಸಿದನಾಸಱಿನು" ||32

ರಾಜರ ವೈಭವದ ಒಡ್ಡೋಲಗದ ವರ್ಣನೆಗಳನ್ನು ಕೊಡುವಾಗಲೂ ಕವಿಗಳು ಸೊಗಸಾದ ಮನೋರಂಜನೆಯ ಚಿತ್ರಗಳನ್ನು ಕೊಡುತ್ತಾರೆ. ಗೋವಿಂದ ವೈದ್ಯನ 'ಕಂಠೀರವನರಸರಾಜ ವಿಜಯ'ದಲ್ಲಿ ಬರುವ 'ಮಹಾನವಮಿಯೊಡ್ಡೋಲಗದುತ್ಸವ'

ಎಂಬ ಪ್ರಕರಣದಲ್ಲಿನ ಈ ಕೆಲವು ಪದ್ಯಗಳನ್ನು ನೋಡಿದರೆ ರಾಜಸಭೆ ಸಮಾರಂಭಗಳಲ್ಲಿ ಯಾವ ಯಾವ ತರಹದ ಮನೋ ರಂಜನೆಯ ಕಾರ್ಯಕ್ರಮಗಳಿರುತ್ತಿದ್ದವು ಎಂಬುದರ ಒಂದು ಕಲ್ಪನೆ ನಮಗೆ ಬರುತ್ತದೆ:

ತಗರಕಾಳಗ ಮದಕರಿಗಳ ಹೋರಾಟ। ವಿಗಡದ ಪುಲಿಕರಡಿ ಗಳ। ಬಿಗಿನೇಣಪರಿದು ಕಾದುವ ವೀರರವೊತ್ತ। ಸೊಗಸ ಬೀರಿದುದೋಲಗದೆ. (ಕಂನವಿ, ೨೧-೯೮); ತಾಳಮದ್ದಳೆವಾರ ನಾರಿಯರ ಸಂಗೀತ। ಮೇಳದೊಳಗೆ ಜತೆಗೂಡಿ। ಸೋಲಿಸು ತಚ್ಚರಿಯರಪೋಹಿ ಪೆಣ್ಗಳು। ಕೋಲಾಟಕ್ಕೆತಂದರಾಗ. (೨೧-೧೦೯); ಬಿರುದಿನತಾಳ ಮದ್ದಳೆ ಸಂಗೀತದ। ಪರಿಪೂರ್ಣ ರವ ಮೋಹಿಸಲು। ಚೆಲುವನರ್ತನದ ಪೆಣ್ಗಳು ಸಭಾಸ್ಥಳವಮು। ರುಳುಗೊಳಿಸಿದರೇನೆಂಬೆ (೨೧-೧೧೩); ಹರಿಯದಶಾವತಾರದ ನಾಟಕವತೋರಿ ಮೆರೆವ ಭಾಗವತರಚೆಂದ (೨೧-೧೧೮); ತುಂಬು ರಾದಿಗಳಂತೆ ಗಾನವಪಾಡುವ ತುಂಬಿದ ವಿದ್ವಾಂಸರುಗಳು ಇಂಬಾಗಿ ಘನಕೃತಿಗಳಪಾಡಿ ಸಭೆಗಾಡಂಬರಗೊಳಿಸಿದರಾಗ (೨೧-೧೧೯); ಒಂದು ದೆಸೆಯೊಳಿಂದ್ರಜಾಲವ ತೋರುವ। ಮುಂದಿ ಬೈರೂಪದಾಟಗಳ, ಸಂದಣಿಸಿ ಹಾಸ್ಯರಸಗಳಿಂದ ಮೆರೆದು। ದಂದಿನ ಸಭೆಯುತ್ತಿಯುಲಿ (೨೧-೧೧೭); ಲಘುಲಾಗು ಲಂಘನೆ ಯೊಳುಗಳೆವಿಂಳಿಯುಲಿ। ಯುಗಣಿತರಹ ಡೊಂಬರುಗಳು। ಬಗೆಬಗೆಯಾಟವತೋರಿಯಾಸ್ಥಾನವ। ವಿಂಗೆ ಮೆಚ್ಚಿಸಿದರೇವೇಳ್ವೆ (೨೧-೯೭); 'ಬಿರಿಸು ಬಾಣಗಳಾಗಮೆರೆದ ಸಂಭ್ರುವನೇವೇಳ್ವೆ' (೨೧-೧೨೪); ಮೊರೆದು ದೀಧಿತಿ ಗೂಡಿ ಚಕ್ರಬಾಣಗಳಂದರಸ ನೋಲಗದೊಳೊಪ್ಪಿದವು (೨೧-೧೨೫); ಆಲ್ಲಲ್ಲಿ ಬಾಣಬಿರಿಸು ಸುರಹೂಗಳು ಪಲ್ಲೈಸಿ ತಂಡುಕಲಂಬರವ (೨೨-೧೦೪)

**ಮೃಗಗಳಿಂದ ಕಾಳಗ**

ಮಲ್ಲಯುದ್ಧ ಮೃಗಯಾವಿನೋದಗಳು ಆಗಿನ ಕಾಲಕ್ಕೆ ಜನರ ಬಹು ಪ್ರಿಯವಾದ ವಿನೋದಗಳಾಗಿದ್ದವೆಂದು ತೋರುತ್ತದೆ. ಕವಿಗಳು ಕೊಡುವ ಪುರವರ್ಣನೆ ಹಾಗೂ ವಿಶೇಷ ಸಮಾರಂಭಗಳ ಚಿತ್ರಗಳಲ್ಲಿ ಇವನ್ನು ಗಮನಿಸಬಹುದು; ಲಕ್ಷ್ಮೀಶ ಕೊಡುವ ಈ ಚಿತ್ರವನ್ನು ನೋಡಿ: 'ತಗರ್ವಣಗಿಸುವ ಸಿಪಿಲೆಗಚ್ಚಿಸುವ ಕೋಳಿಕಾಳಗವ ಕಾದಿಸುವ ಕರಿತುರಗದೇರಾಟಮಂ ಮಿಗೆತೋರಿಸುವ' (ಜೈಭಾ, ೬–೩೯).

ನಂಜುಂಡಕವಿಯು ಹೊಸಮಲೆದುರ್ಗವನ್ನು ವರ್ಣಿಸುವಾಗ ಪುರದ ಹೊರವಳಯದೊಳಗೆ ಎಂಟು ದಿಕ್ಕಿನಲ್ಲೂ ಗರುಡಿಗಳಿದ್ದವೆಂದೂ ಅಲ್ಲಿ ಬಿರುದಿನ ಬಂಟರಿಗೆ ಪಾಡುಗಳನ್ನು ಬರಿಸುವ ಅಭ್ಯಾಸಿಗಳಿದ್ದರೆಂದೂ ಹೇಳುತ್ತಾನೆ.[33] ಹಾಗೆಯೇ 'ಕೋಡುಗಳಿಗೆ ಸೂನಗಿಗಳ್ ಸೇರಿಸಿ। ಜೋಡಿಸಿ ಪಣೆಗೆ ಕೂರಲಗ। ಕೂಡೆ ಕಾದಿಸುವರು ಕೋಣಗಳನು ಜೂ। ದಾಡೆ ಪುಲಿಗಳೊಡನಲ್ಲಿ'. ಇನ್ನೊಂದು ಕಡೆ 'ಇತ್ತರದೊಳು ಜೂದುಗಾಱರು ಕಪಳವ। ತುತ್ತಿ ನಿಂಬೆಯಪಣ್ಪಳಿಯನು। ನೆತ್ತಿಗೊರಸಿ ಖೋ ಯೆಂದಾರಿ ತಗರಿನ। ಮೊತ್ತವನಲ್ಲಿ ಕಾದಿಪರು.'[34] ಹೀಗೆ ಆ ಹೊಸಮಲೆ ದುರ್ಗದ ಹೊರವಲಯದಲ್ಲಿ, 'ಬಿಲ್ಲಾಳು ಗುಱಿಗಳ ನೆಸುವ ಬಯಲಬಲು। ಮಲ್ಲರು ಹೆಣಗುವ ಬಯಲು। ಪಲ್ಲ ಮುಱಿಯ ಸಾಧನೆಯ ಬಯಲುಂಕ। ಣ್ಗಲ್ಲಲ್ಲಿ ಕರಮೆಸೆದಿಹುದು.'[35]

ಕನಕದಾಸರು ಮೋಹನತರಂಗಿಣಿಯಲ್ಲಿ ಕೊಡುವ ಈ ವರ್ಣನೆಯನ್ನು ನೋಡಿ: "ಪಿಕ್ಕಳ ದ್ವಿತಯಲಾವುಗೆ ತೋರಗಿರುಜೆಯ

ಕಂಕ್ಕಟ ತಗರು ಕೋಣಗಳ ಸೊಕ್ಕಾನೆಗಳ ಕಾದಿಸುತಿರ್ದದೊರೆಗಳ ಮಕ್ಕಳಕೂಡೆ ಬೀದಿಯಲಿ." (ವೋತ ೧೭-೮೨).

**ಆನೆ ಕುದುರೆಗಳಿಂದ ವಿನೋದ**

ಆನೆ ಕುದುರೆಗಳಿಗೆ ಅನೇಕ ರೀತಿಯ ಆಟಗಳನ್ನು ಕಲಿಸಿ, ವಿಶೇಷ ಸಂದರ್ಭಗಳಲ್ಲಿ ಅವುಗಳಿಂದ ಪ್ರದರ್ಶನವನ್ನು ಏರ್ಪಡಿಸಿ ಜನರಿಗೆ ವಿನೋದವನ್ನುಂಟುಮಾಡುವುದು ಹಿಂದಿನಿಂದಲೂ ಬಂದಿದೆ. ಇಂದಿಗೂ ಇದೆ. ಆನೆ ಕುದುರೆಗಳನ್ನು ಏರುವುದರಲ್ಲಿ ಕೌಶಲವನ್ನು ಪ್ರದರ್ಶಿಸಿ ವೈವಿಧ್ಯತೆಯನ್ನು ತೋರುತ್ತಿದ್ದ ಕೆಲವರ ಹೆಸರುಗಳನ್ನು ಶಾಸನಗಳು ಹೇಳುತ್ತವೆ.[36] ಆನೆ ಕುದುರೆಗಳು ತೋರುತ್ತಿದ್ದ ಕೌಶಲಪ್ರದರ್ಶನವನ್ನು ರತ್ನಾಕರ ಎರಡು ಸಂದರ್ಭಗಳಲ್ಲಿ ವರ್ಣಿಸಿದ್ದಾನೆ. ಇದು ನವರಾತ್ರಿ ಹಬ್ಬದ ಸಮಯದಲ್ಲಿ: ನಿಂದುದು ಪುಷ್ಪಕ ನೃಪನಿದಿರೊಳು ಕೂಡೆ ನಿಂದುವು ತೇಜಗಳ್ಬಳಿಸಿ. ನಿಂದಲ್ಲಿ ನಿಲ್ಲದೆ ಕುಣಿವುತಿದ್ದುವು ಮರ್ಖು ಚಂದ ಚೆಂದದ ವಾದ್ಯಗತಿಗೆ ರನ್ನದ ಗಗ್ಗರ ಬಣ್ಣ ಬಗೆಯ ಜೋಲಿ. ಹೊನ್ನ ಹೂವೆಸೆವ ಬಾಸಿಗದಿ. ಖುರದಿಂದ ನೆಲನ ಹೊಯ್ದುವು ಘಲಘಲ ನುಲಿದೆರಡು ಕಾಲೆತ್ತಿ ನಿಲ್ಲುವುವು. ಸರಳಿಸಿ ಹತ್ತೆಂಟಹಾರಿ ತೇಜಿಗಳು ಭೂವರನಿದಿರರ್ತಿದೋರಿದುವು. ಕುದುರೆಗಳತ್ತಲಾಯಿಂಕೆ ಸಾರಲೊಡನಿತ್ತಸದೆವವಾದ್ಯದಗಲಭೆಯೊಳು ಮದದಾನೆಯೊಡ್ಡು ಸಾರ್ತರುತಿದ್ದುದಾರಾಯನಿದಿರಾಗಿ.[37]

"ಪಟ್ಟದಾನೆಯ ಮೇಲೆ ರಜತಾದ್ರಿಗೊಡೆಯನಪ್ರತಿಮ ಬಿಜಯಂಗೈಸಿರೆ ಕಾಣಲೊಡನೆರಾಯ ನಿಜಭಕ್ತಿಯಿಂದೆದ್ದು ನಿಂದ. ಕರಿಗಳೆಲ್ಲವು ತಮ್ಮ ಸೊಂಡಿಲನೆತ್ತಿ ಶ್ರೀ ಕರದಿಂದ ಸೇಸೆಯ ಸೂಸಿ ಸ್ವರ ದೋರಿ ಬಲಗಾಲ ದಂತದ ಮೇಲಿಟ್ಟು ಶಿರಬಾಗಿದವು ಚಕ್ರಧರಗೆ.[38]

ನವರಾತ್ರಿ ಹಬ್ಬದ ಸಮಯದಲ್ಲಿ ರತ್ನಾಕರ ಕೊಡುವ ಈ ವರ್ಣನೆಯಲ್ಲಿ, ಕವಿ ಪಟ್ಟದಾನೆ ಪಟ್ಟದ ಕುದುರೆಗಳು ಇತರ ಆನೆ ಕುದುರೆಗಳ ಜೊತೆಯಲ್ಲಿ ಬಂದು ರಾಜನಿಗೆ ಗೌರವ ಸೂಚಿಸಿ ಹೋದವು ಎಂದಷ್ಟು ಮಾತ್ರ ಹೇಳುತ್ತಾನೆ. ಇಲ್ಲಿ ಕವಿಯ ದೃಷ್ಟಿಯೆಲ್ಲ ನವರಾತ್ರಿ ಹಬ್ಬದ ಸಮಯದಲ್ಲಿ ನಡೆಯುವ ನಾನಾ ಉತ್ಸವಗಳು, ಸಮಾರಂಭಗಳು ಹಾಗೂ ಕಲಾ ಪ್ರದರ್ಶನಗಳ ಕಡೆಗೆ. ಆದರೆ ಆನೆ ಕುದುರೆಗಳು ಮತ್ತು ಅವುಗಳ ಮೇಲೆ ಕುಳಿತ ಸವಾರರು ತೋರುತ್ತಿದ್ದ ಅದ್ಭುತ ಕೌಶಲ ಪ್ರದರ್ಶನವನ್ನು ನೋಡಬೇಕಾದರೆ ಮುಂದೆ ಅವುಗಳನ್ನು ತನಿ ತನಿಯಾಗಿ ವರ್ಣಿಸಲು ಅವಕಾಶವಿರುವ 'ಪೂರ್ವ ಸಾಗರ ದರ್ಶನಸಂಧಿ' (ಸಂಧಿ, ೨೩) ಮತ್ತು 'ಕುಮಾರ ವೈಹಾಳಿ ಸಂಧಿ' (ಸಂಧಿ, ೩೦) ಗಳನ್ನು ನೋಡಬೇಕು.

ರಾಜರು ದಿಗ್ವಿಜಯ ಕೈಗೊಂಡಾಗ ದೂರದ ಪಯಣದಲ್ಲಿ ಆಸರು ಕಳೆದು ಬೇಗ ಬೇಗ ದಾರಿ ಸಾಗಲೆಂದು ರಾಜರೂ ಹಾಗೂ ಅದರಲ್ಲಿ ಭಾಗವಹಿಸಿದ ರಾಜ ಪರಿವಾರದವರ ವಿನೋದಾರ್ಥವಾಗಿ ಅನೇಕ ಕಾರ್ಯಕ್ರಮಗಳಿರುತ್ತಿದ್ದವು. ಅಂತಹ ಒಂದೆರಡು ಚಿತ್ರಗಳನ್ನು ರತ್ನಾಕರ ಭರತ ಚಕ್ರಿಯ ದಿಗ್ವಿಜಯ ಸಂದರ್ಭದಲ್ಲಿ ಕೊಡುತ್ತಾನೆ. ಕುದುರೆ ಸವಾರರು ಭರತೇಶನಿದಿರ್ಗೈತಂದು ಕೈಮುಗಿದು ವಾದ್ಯಗತಿಯಲ್ಲಿ ತಮ್ಮ ಕುದುರೆಯನ್ನು ಚದುರಿಂದ ಕುಣಿಸುತೆಯ್ದುವರು ; ಅಡ್ಡವಡ್ಡಕೆ ತೆಗೆವರು. ತಿರಿಮುರಿಯೆ ನಲಡ್ಡಹರಿವ ಹೊಳೆಯಂತೆ ವೇಢೆಯೊಳು ತೆಗೆವರು ಕುಂಭಕಾರನ ರೂಢಿಯ ಚಕ್ರದಂದದೊಳು. ಪ್ರೌಢ ಚಕ್ರಿಯಬಲವೆಂಬ ಸಮುದ್ರದಗಾಧಸುಳಿಯೊಯೆಂಬಂತೆ ಕಿರಿದಿನೊಳೊಲೆವರಲ್ಲಲ್ಲಿಗೆ ಹಾರಿಸಿ ತಿರುಗಿದುವ್ವಾಳಿಸುತಿಹರು. ತೆರಪನರಿದು ಸಡಿಲವ

ಬಿಟ್ಟುದಾ (ಹಾ) ಎಂದು ನೆರೆಬೇಗದೋರ್ಪರೊಡೆಯಂಗೆ ತಂಪ್ಪಿಸುವರು ಕುಣಿಸುವವೆಡ ಬಲಕಂದಕಪ್ಪಿಸುವರುಂ ಮೇಣದಂತೆ. ತೆಪ್ಪವ ತೆಗೆವಂತೆ ತೆಗೆದೇರಿ ರಾವುತರೊಪ್ಪದಿ ಬಂದರೋಲೈಸಿ.[39]

ಮುಂದೆ ಇನ್ನೊಂದು ಸಂದರ್ಭದಲ್ಲಿ ಕವಿ ಕೊಡುವ ಅಶ್ವಕ್ರೀಡೆ ಹಾಗೂ ಅಶ್ವಾರೋಹಿಯು ಕೌಶಲದ ವರ್ಣನೆ ಇನ್ನೂ ಸುಂದರವಾಗಿದೆ. ಓಡುವ ಕುದುರೆಯುಮೇಲಿಂದ ನಿಂಬೆಯುಹಣ್ಣನ್ನು ಬಾಣದಿಂದ ಭೇದಿಸಿದ ದೃಶ್ಯ ಅದ್ಭುತವಾಗಿತ್ತು. "ಇಂಬಿನಿಂದೋಡುವಶ್ವದೊಳು ಬಾಂಗೆಡೆಗೊಂದುಂ ನಿಂಬೆಯುಹಣ್ಣ ತಾನಿಟ್ಟು ಆಂಬಿನಿಂದಾ ಹಣ್ಣನೆಚ್ಚು ತುಂಡಿಸಿದನೇನೆಂಬೆನವನ ಚಮತ್ಕೃತಿಯಾ, ಓಡಿಸುತಶ್ವನೊಂದಂಬನಭಕೆ ಸಿಂಗಾಡಿಯಿಂದೆಚ್ಚು ಮತ್ತದನು ಕೂಡೊಂದು ಬಾಣದಿಂದೆಚ್ಚು ತುಂಡಿಸಿದನಾ ನೋಡುವವರೆಲ್ಲ ಭಾಪೆನಲುಂ."[40]

ಕುದುರೆಗಳನ್ನು ಆಡಿಸಿದಂತೆಯೇ ಮಾವತಿಗರು ಮದ್ದಾನೆಯಂ ನೂಂಕಿ ಕಲಾವಿದನಿದಿರಿಗೆ ಬಂದು ದೇವಗೆ ಪೊಡವಡೆಂದಾನೆಯಂ ನೆರಗಿಸಿ ತಾವು ಕೈಮುಗಿದರುಬ್ಬಿನೊಳು. ಅಂಕುಶವಿಟ್ಟಡ್ಡ ತೆಗೆವರಾನೆಯಂ ಕಾಲ ಸಂಕಲೆ ಝುಣರು ಝುಗ್ಗೆನಲುಂ. ಆನೆಯಂ ಬಳಿವಿಡಿದಾನೆಯುನಡೆಸಿ ಸಾಲಾನೆಯಂ ಕಾಣಿಸಿದಾಗ ಸೇನಾಂಬುರಾಶಿಗೆ ಸೇತುವೆಗಟ್ಟಿದವೊಲು ಮಾನವೇಂದ್ರಂಗೆ ತೋರುತಿಹರು. ಸೊಂಡಿಲನೆತ್ತಿಬಾಲವ ನೀಡಿ ಕಿವಿಗಳ ಮುಂಡಿಸಿ ಬಲ್ದನಿದೋರಿ ಚಂಡೇಭಸುಳಿದುವು ಗಿರಿಯಿಂದ ಕಡು ದೊಡ್ಡಗಂಡುಂಗಳುರುಳುವಂದದೊಳು.[41]

ರತ್ನಾಕರನು ನವರಾತ್ರಿ ವೈಭವದ ಸಂದರ್ಭದಲ್ಲಿ ಕೊಡುವ ವಿನೋದ ಪ್ರದರ್ಶನಗಳ ವರ್ಣನೆಯಲ್ಲಿ ಬೊಂಬೆಯಾಟ, ಡೊಂಬರಾಟ, ಇಂದ್ರಜಾಲ, ಮಹೇಂದ್ರಜಾಲ. ಮಲ್ಲಯುದ್ಧ, ಆನೆ

ಕುದುರೆಗಳಿಂದ ವಿನೋದ, ಬಾಣ ಬಿರುಸುಗಳು-ಬಹಳ ಮುಖ್ಯ ವಾದವು. ವಿದೇಶೀ ಪ್ರವಾಸಿಗಳಾದ ಅಬ್ದುರ್ ರಜಾಕ್ ಪಾಯೇಸ್ ನ್ಯೂನಿಜ್-ಅವರುಗಳು ಕೊಡುವ ನವರಾತ್ರಿ ಹಬ್ಬದ ವರ್ಣನೆ ಯಲ್ಲಿ ರತ್ನಾಕರನ ವರ್ಣನೆಗೆ ಪುಷ್ಟಿದೊರೆಯುತ್ತದೆ. ವಿಜಯ ನಗರದ ಅರಸರು ಲೋಕಕಚ್ಚರಿ ಎನ್ನುವಂತೆ ನಡೆಸುತ್ತಿದ್ದ ಈ ಇತಿಹಾಸ ಪ್ರಸಿದ್ಧ ಉತ್ಸವವನ್ನು ವರ್ಣಿಸಲು ಕವಿ ಬಂದು ಇಡೀ ಪ್ರಕರಣವನ್ನೇ ಮೀಸಲಾಗಿರಿಸಿ ಅದನ್ನು 'ನವರಾತ್ರಿ ಸಂಧಿ' ಎಂದು ಅರ್ಥಗರ್ಭಿತವಾಗಿ ಹೆಸರಿಸಿದ್ದಾನೆ. ಸಮಕಾಲೀನ ದಾಖಲೆ ಗಳೊಂದಿಗೆ ಸರಿಮಿಗಿಲಾಗಿ ನಿಂತಿರುವ ಈ ಪ್ರಕರಣ ಇತಿಹಾಸ ಕಾರರ ಕುತೂಹಲವನ್ನು ಕೆರಳಿಸಿ ತಣಿಸಿದರೆ ಆಶ್ಚರ್ಯವೇನಿಲ್ಲ !

### ರತ್ನಾಕರ–ಗೋವಿಂದ ವೈದ್ಯರ ಒಡ್ಡೋಲಗದುತ್ಸವ

ರತ್ನಾಕರ ಕೊಟ್ಟಂತಹ ವೈಭವದ ಒಡ್ಡೋಲಗದ ವರ್ಣನೆ ಗಳನ್ನು ಕೊಟ್ಟಿರುವ ಮತ್ತೊಬ್ಬ ಕವಿಯೆಂದರೆ ಗೋವಿಂದವೈದ್ಯ. ರತ್ನಾಕರನ ಭರತೇಶವೈಭವದ ನವರಾತ್ರಿ ಸಂಧಿಯಲ್ಲಿ ವಿಜಯ ನಗರದ ಅರಸರ ಒಡ್ಡೋಲಗದ ವೈಭವವನ್ನು ಕಂಡರೆ, ಗೋವಿಂದ ವೈದ್ಯನ 'ಕಂಠೀರವನರಸರಾಜ ವಿಜಯದ' 'ಮಹಾನವಮಿ ಯೊಡ್ಡೋಲಗದುತ್ಸವ' ಹಾಗೂ ವಿಜಯಂದಶಮಿಯ ಜಂಬು ಸವಾರಿ'–ಎಂಬ ಪ್ರಕರಣಗಳಲ್ಲಿ ಒಡೆಯರ ಕಾಲದ ಒಡ್ಡೋಲಗದ ವೈಭವವನ್ನು ಕಾಣಬಹುದು. ವಿಜಯನಗರದ ಅರಸರು ಆಚರಿಸುತ್ತಿದ್ದ ಇತಿಹಾಸ ಪ್ರಸಿದ್ಧ ನವರಾತ್ರಿ ಉತ್ಸವದ ಮಾರ್ಪೊಳವೆತಾನೆ ಮೊನ್ನೆ ಮೊನ್ನೆಯವರೆಗೂ ಮೈಸೂರು ಅರಮನೆಯಲ್ಲಿ ನಡೆಯುತ್ತಿದ್ದ ದಸರಾ ಉತ್ಸವಗಳು ! ರತ್ನಾಕರನ ಪ್ರಭಾವ ಗೋವಿಂದ ವೈದ್ಯನ ಮೇಲೆ ಸಾಕಷ್ಟು ಆಗಿರಬಹು ದೆಂಬುದಕ್ಕೆ ಸಾಕಷ್ಟು ನಿದರ್ಶನಗಳನ್ನು ಕೊಡಬಹುದು. ಆದರೆ

ಅದೇ ಒಂದು ತುಲನಾತ್ಮಕ ವಿವೇಚನೆಯ ಪ್ರತ್ಯೇಕ ಪ್ರಬಂಧ ವಾದೀತು ! ಆದರೂ ಅಲ್ಲಲ್ಲಿ ಅಡಿಟಿಪ್ಪಣಿಗಳಲ್ಲಿ ಈ ವಿಷಯ ವನ್ನು ಪ್ರಸ್ತಾಪಿಸಿದೆ.

**ಇಂದ್ರಜಾಲ–ಮಹೇಂದ್ರಜಾಲ**

ಇಂದ್ರಜಾಲ–ಮಹೇಂದ್ರಜಾಲ ವಿದ್ಯೆಗಳು ಬಹಳ ಪ್ರಾಚೀನ ವಾದವು. ವಾತ್ಸಾಯನನ ಕಾಮಸೂತ್ರದಲ್ಲಿ ಹೇಳಿರುವ ೬೪ ಕಲೆ ಗಳಲ್ಲಿ ಐಂದ್ರಜಾಲಿಕವೂ ಒಂದು.[42] ಸಾರ್ವಜನಿಕ ಸಮಾರಂಭ ಗಳಲ್ಲಿ ಇಂದ್ರಜಾಲಿಗರು ತಮ್ಮ ಅದ್ಭುತ ಜಾಣ್ಮೆಯಿಂದ ಜನರನ್ನು ಯಾವ ರೀತಿ ಮೂಕವಿಸ್ಮಿತರನ್ನಾಗಿ ಮಾಡುತಿದ್ದರು ಎಂಬುದನ್ನು ರತ್ನಾಕರ ಸೊಗಸಾಗಿ ವರ್ಣಿಸಿದ್ದಾನೆ :

"ಓಲೆಯುಮರ ಕೆಡದಂತೆ ಹೆಬ್ಬಾವುಗಳೇಳುತುರುಳುತಿದ್ದು ವಾಗ. ಇಂದ್ರಾವತಾರ ಚಿತ್ತೈಸೆಂದು ಕೈಮುಗಿದಿಂದ್ರ ಜಾಲಿಗನು ಮಂತ್ರಿಸಿದ. ಇಂದ್ರ ನೀಲದೊಳು ಮಾಡವನೊಡ್ಡಿ ತಂದು ದೇವೇಂದ್ರನ ತೋರಿದನಲ್ಲಿ. ಊರ್ವಶಿ ರಂಭೆ ಮೇನಕೆಯರ ಶೃಂಗಾರ ಪೂರ್ವಕವಾಗಿ ತೋರಿದೊಡೆ ಉರ್ವಿಯ ಜನವರೆ ಬಾಯ್ದೆರೆದೀಕ್ಷಿಸೆ ಸಾರ್ವಭೌವಂನು ನಸುನಕ್ಕ, ತಂದ್ರತೊಲಗು ತೊಲಗೆಂದು ಬಂದೊಡನೆ ಮಹೇಂದ್ರಜಾಲಿಗನು ಕೈಮುಗಿದು ಸಾಂದ್ರ ಸಮುದ್ರವ ತೋರಿದ. ಹೊರಗೋಟೆ ಇಂದ್ರಾದಿ ದಶದಿಕ್ಕು ತುಂಬಿ ಕೋಟೆಗಡ್ಡಾಗಿ ಬಾನದೊಳೂರ ನಿರ್ಮಿಸಿ ಕೋಟಿ ಪಾತ್ರವನಲ್ಲಿ ನೆರಹಿ ಸಾಟಿಯಿಲ್ಲೆನಿಸಿ ಗಂಧರ್ವ ನೃತ್ಯವ ಖೇಂದ್ರ ನಾಟಕ ತೋರಿದನೊಡನೆ."[43]

ಹೀಗೆ ಇಂದ್ರ ಜಾಲಿಗರು ಗೋವಿಂದ ಗತಿಗಳು ಮಹೇಂದ್ರ ವಿಸ್ಮಯರು. ಖೇಂದ್ರನಾಟಕರು ಅನುವಾಗಿ ಭರತರಾಜೇಂದ್ರಂಗೆ

ಆಟವನ್ನು ತೋರಿ[44]ರಾಜನಿಂದಲೂ ಜನರಿಂದಲೂ ಮೆಚ್ಚುಗೆಯನ್ನೂ ಬಳುವಳಿಯನ್ನೂ ಪಡೆದರು.[45]

**ಡೊಂಬರಾಟ**

"ಡೊಂಬರ ಸಾವು ಗಣೆಯಮೇಲೆ, ಬಿಲ್ಲರ ಸಾವು ಮರದ ಮೇಲೆ." ರತ್ನಾಕರ ಕೊಡುವ ನಾನಾ ಕ್ರೀಡೆಗಳ ವರ್ಣನೆಯಲ್ಲಿ ಡೊಂಬರಾಟವೂ ಒಂದು. 'ಗಣೆಯನೇರಿದ ಡೊಂಬರು ಆ ಎತ್ತರದಿಂದಲೇ ರಾಜನ ಮುಖ ಕಮಲವನ್ನು ನೋಡುತ್ತ, ಅವನ ಕಣ್ಣ ಸೂಚನೆಯನ್ನು ಕಾಯುತ್ತ ತಟಪಟ ನುಬ್ಬಿ ತಮ್ಮ ಚಮತ್ಕಾರವನ್ನು ತೋರಿದರು' ಎಂದು ಕವಿ ವರ್ಣಿಸುತ್ತಾನೆ.[46]

ಡೊಂಬರು ಒಂದುಬಗೆಯ ಅಲೆಮಾರಿ ಜನ. ಹೊಟ್ಟೆ ಪಾಡಿಗಾಗಿ ಅವರು ಮೋಡಿ, ಮಂತ್ರ, ಕಣಿ ಹೇಳುವುದು—ಮುಂತಾದುವುಗಳನ್ನು ಮಾಡುತ್ತಾರೆ. ಇಂತಹ ಕಷ್ಟಜೀವಿಗಳನ್ನು ಕಂಡು ಒಬ್ಬ ವಚನಕಾರ ಅನುಕಂಪ ತಾಳಿದ್ದಾನೆ: "ಹೊಟ್ಟೆಯ ಕಕ್ಕುಲತೆಗೆ ಕಷ್ಟಜೀವವ ಹೊರೆವ ಹೆಬ್ಬೊಟ್ಟೆಯ ಡೊಂಬರ ಕಂಡು ಬಟ್ಟೆಬಯಲಾದೆಯೋ"[47] 'ಕೊಲ್ಲಟಿಗರಬೀಡೆಸೆದಿರ್ಕುಂ' ಎಂದು ವರ್ಣಿಸಿರುವ ಒಬ್ಬ ಕವಿಯ ವರ್ಣನೆಯಲ್ಲಿ ಡೊಂಬರ ಬೀಡಿನ ಬಡತನದ ನೈಜ ಚಿತ್ರವಿದೆ:

"ನೂಲ್ಗಟ್ಟಿಪೊಯ್ದ ಪೊಸಗುಡಿ। ಸಲ್ಗಳ್‌ತವೆ ನಟ್ಟಗಟಿಗಳಿರಿಸಿದದೋಳ್ಗಳ್। ಕಾಲ್ಗಟ್ಟಿ ಮೇವ ಕಟ್ತೆಯ। ಸಾಲ್ಗಳಿಂ ಕೊಲ್ಲಟಿಗರ ಬೀಡೆಸೆದಿರ್ಕುಂ" (ಕವಿಚರಿತ್ರೆ ೧, ಪದ್ಯ. ೯೪೩).

ಶಾಸನಗಳಲ್ಲೂ ಈ ಅಲೆಮಾರಿ ಜೀವಿಗಳ ಬಗೆಗೆ ಕೆಲವು ವಿಷಯಗಳು ದೊರೆಯುತ್ತವೆ.[48] ಡೊಂಬರ ಜೀವಿತಕ್ಕೆ ಸಂಬಂಧಿಸಿದಂತೆ ಡೊಂಬರ ಕುಣಿತ,[49] ಡೊಂಬರಲಾಗ,[50] ಡೊಂಬರ ಕೋಡಗ[51] ಎಂಬ ನುಡಿಗಟ್ಟುಗಳೂ ಹುಟ್ಟಿಕೊಂಡಿವೆ.

ಡೊಂಬರು, ಗಾರುಡಿಗರು ವಿದೇಶೀಯರನ್ನು ಸಹ ಆಕರ್ಷಿಸಿದ್ದಾರೆ. ಅಬ್ದುರ್‌ರಜಾಕ್ ಮತ್ತು ಲಿನ್‌ಷಾಟನ್ ಎಂಬುವರು ಇವರ ಬಗ್ಗೆ ಅನೇಕ ವಿಚಾರಗಳನ್ನು ಹೇಳಿದ್ದಾರೆ.[52]

ಕಡೆಯದಾಗಿ ಅಣ್ಣಾಜಿ ಕೊಡುವ ಡೊಂಬರಾಟದ ಈ ಚಿತ್ರವನ್ನು ನೋಡಬಹುದು :

"ಗಣೆಯ ತುದಿಯಲಿ ಶಸ್ತ್ರವನಿಟ್ಟು ವುಂಗುಟ। ದ ಕೊನೆಯೂಜಿ ಪುಟವೆದ್ದು ಲಾಗುಲವಣೆಯ ಕೊಂಡು। ಮಿಣೆಯ ಹುರಿಗಳ ಮೇಲೆ ಮರಗಾಲತಟ್ಟಿದುವ್ವಾಳಿಸುತೆ ಡೊಂಬಿತಿಯರು। ಮಣಿಮ ಹಿಂಗರಣಮನೆಕೊಂಡು ವೊಜಿಯಗಿದಲಗ। ಪಣೆಯಲ್ಲಿ ಗುಂಜಿಯಗ್ರದೊಳಿಟ್ಟು ಖೋಯೆನುತೆ। ತ್ರಿಣಯನಾಪರರೂಪನೇ ನೋಡು ನೋಡೆಂದು ಡೋಳು ಬಡಿದರು ಡೊಂಬರು."[53]

## ಜಟ್ಟಿಕಾಳಗ

ಹಿಂದಿನ ಕಾಲದಲ್ಲಿ ಜನರ ಶಕ್ತಿಸಾಹಸ ಪ್ರದರ್ಶನಕ್ಕೆ ಜಟ್ಟಿಕಾಳಗ (ದ್ವಂದ್ವಯುದ್ಧ, ಮಲ್ಲಯುದ್ಧ) ಕತ್ತಿವರಿಸೆ ಮತ್ತು ಬೇಟೆ ಇವು ಮುಖ್ಯ ಸಾಧನಗಳಾಗಿದ್ದವು.[54] ಅಲ್ಲದೆ ಇವು ಸಾಮಾನ್ಯ ಜನರನ್ನೂ ಆಕರ್ಷಿಸಿ ಮನೋರಂಜನೆಗೂ ನೆರವಾಗಿದ್ದವು. ರಾಜರೇ ಈ ಪ್ರದರ್ಶನಗಳಲ್ಲಿ ಭಾಗಿಗಳಾಗಿ ಮಾರ್ಗದರ್ಶಕರಾಗಿದ್ದರು. ಕೃಷ್ಣದೇವರಾಯನ ಬೆಳಗಿನ ವ್ಯಾಯಾಮವನ್ನು ಕುರಿತು ಪ್ರವಾಸಿ ಪಾಯೇಸ್ ಕೊಡುವ ವರ್ಣನೆ ಸುಂದರವಾಗಿದೆ.[55]

ಮಲ್ಲರು ಒಂದು ಜನಾಂಗವಾಗಿದ್ದು[56] ಸಮಾಜವಲ್ಲಿ ಒಂದು ಗಣ್ಯಸ್ಥಾನವನ್ನು ಪಡೆದು ರಾಜರಿಂದಾದಿಯಾಗಿ ಸಾರ್ವತ್ರಿಕ ಮನ್ನಣೆಯನ್ನು ಪಡೆದಿದ್ದರು.[57] ರಾಜಸಭೆಗಳಲ್ಲಿ ಶೋಭಿಸುತ್ತಿದ್ದ

ಕಲಾವಿದರಲ್ಲಿ ಮಲ್ಲರೂ ಕಠಾರಿವೀರರೂ ಇರುತ್ತಿದ್ದರು.[58] ಹಾಗೆಯೇ ರಾಜರು ವಿಶೇಷ ಸಂದರ್ಭಗಳಲ್ಲಿ ಏರ್ಪಡಿಸುತ್ತಿದ್ದ ವಿನೋದ ಪ್ರದರ್ಶನಗಳಲ್ಲಿ ಜಟ್ಟಿಕಾಳಗವೂ ಇರುತ್ತಿತ್ತು.[59]

ಕನಕದಾಸರು ದ್ವಾರಕಾನಗರಿಯಲ್ಲಿದ್ದ ನಾನಾ ಬಗೆಯ ಜನರನ್ನು ವರ್ಣಿಸುತ್ತ ಅಲ್ಲಿ । ತೋರಿಯಭುಜವೆತ್ತು ಜಗಜಟ್ಟಿ ಮಸೆದ ಕಠಾರಿ ಖಂಡೆಯದಮಾಸಾಳು (ಶೂರ)ಗಳು ಇದ್ದುದಾಗಿ ಹೇಳು ವರು. (ಮೋತ, ೩-೩೩), ಈ ಮಲ್ಲರಿಂದ ಆಗಾಗ ಸಾರ್ವಜನಿಕ ಪ್ರದರ್ಶನಗಳೂ ನಡೆಯುತ್ತಿದ್ದವು. ಹೀಗೆ ನಡೆಯುತ್ತಿದ್ದ ಸಾರ್ವ ಜನಿಕ ಪ್ರದರ್ಶನಗಳನ್ನು ಕಳೆಗಟ್ಟಿಸಲು, ಸುಪ್ರಸಿದ್ಧ ಮಲ್ಲರನ್ನು ಎದುರಿಸಿ ಹೋರಾಡಲು ಮಾಸಾಳುಗಳನ್ನು ದುಡ್ಡುಕೊಟ್ಟು ಕರೆಸುತ್ತಿದ್ದರೆಂದು ತೋರುತ್ತದೆ.

ಹೊಟ್ಟೆಪಾಡಿಗಾಗಿ ನಾನಾವೃತ್ತಿಯನ್ನು ಅವಲಂಬಿಸಿ ಹಣ ಸಂಪಾದನೆ ಮಾಡುವಂತೆ ಮಲ್ಲಯುದ್ಧದಲ್ಲೂ ಭಾಗವಹಿಸಿ ಹಣ ಸಂಪಾದಿಸುತ್ತಿದ್ದರೆಂದು ತೋರುತ್ತದೆ. "ಪಲ್ಲಕ್ಕಿ ಹೊರುವುದು ಹೊಟ್ಟೆಗಾಗಿ ದೊಡ್ಡಮಲ್ಲರೊಡನಾಡುವುದು ಹೊಟ್ಟೆಗಾಗಿ" ಎಂಬ ಪುರಂದರದಾಸರ ಕೀರ್ತನೆ (೪–೫೫) ಈ ಅರ್ಥವನ್ನು ಧ್ವನಿಸುತ್ತದೆ.

ಮಲ್ಲರು ಸಾಧನೆ ಮಾಡುವ ಗರುಡಿಮನೆ, ಅಲ್ಲಿನ ಮಲ್ಲಗಂಬ, ಅವರು ಸಾಧನೆ ಮಾಡುತ್ತಿದ್ದ ರೀತಿ, ಆಗ ಅವರ ಉಡಿಗೆ ತೊಡಿಗೆ ಗಳು–ಮುಂತಾದುವನ್ನು ಕುರಿತು ಸಾಹಿತ್ಯ ಕೃತಿಗಳು ದೊರಕಿಸುವ ವರ್ಣನೆಗಳು ಗರುಡಿಮನೆಯ ಒಂದು ವಾಸ್ತವ ಚಿತ್ರವನ್ನು ಮೂಡಿಸಲು ಸಹಾಯವಾಗಿವೆ.[60] ಪ್ರಕೃತದಲ್ಲಿ ರತ್ನಾಕರ, ಚಾಟು ವಿಠಲ, ನಾರಣಪ್ಪ, ಗೋವಿಂದ ವೈದ್ಯ—ಅವರುಗಳ ಮಲ್ಲ ಯುದ್ಧ ವರ್ಣನೆಯಿಂದ ಕೆಲವು ಪದ್ಯಗಳನ್ನು ಉದಾಹರಿಸಿದೆ:

"ಚೆಲ್ಲಣ ಹೊನ್ನುಡ್ಡಿಯಾಣ ಮೇಲ್ಪಿಗುಹಿನ ಕುಲ್ಲಾಯಿಂ ಕುಂಕುಮತಿಲಕಾ. ಗೆಲ್ಲದಿಪಿಡಿದ ತಾವಡಗೋಲ್ಗಳಿಂದತಿಮಲ್ಲ ರೆದ್ದರು ಸಾಧನೆಗೆ" (ಭವ್ಯ, ೬೦-೧೩).

"ಕರಕಮಲದೆ ವಜ್ರಮುಷ್ಟಿ ಮಸ್ತಕದೊಳು । ಮೆರೆವ ಕುಂಕುಮ ರಜದಿಂದ । ಕೊರಳ ಪೂಮಾಲೆ ಕಸ್ತೂರಿ ಲೇಪನದ ಮಲ್ಲ । ರುರವಣಿಸಿದರಾಹವಕೆ" (ಕಂನವಿ, ೨೧-೯೦).

ಮೇಲಿನದು ಮಲ್ಲರ ವೇಷಭೂಷಣಗಳದಾದರೆ ಮುಂದಿನದು ಅವರ ಹೋರಾಟದ ವೈಖರಿ :

"ಜಟ್ಟಿಗಳಂಬ್ಬಿ ಭೋಯೆಂದಾಯ್ದು ಭುಜಗಳ । ತಟ್ಟಿ ಕೊಂಡೊಡೆಯು ಜೇಯೆಂದು । ಥಟ್ಟು ತಟ್ಟನೆ ತಿವಿದರೊಬ್ಬ ರೊಬ್ಬರ ತೆಗೆ । ದಿಟ್ಟಾಡಿ ಕೆಡೆದರತ್ತಿತ್ತ" (ಭವ್ಯ, ೨೦-೩೮, ೩೯)

"ಚರಣಹತಿಗೆ ಬಿರಿಯಲುಭೂವಿಂ ಭೋಯೆಂ । ದಂರಗ ಬಂಧದಲಿ ತಕ್ಕೈತಿಸಿ । ಪರಿಪರಿಕೌಶಲಗಳ ಮುಷ್ಟಿಗಾಯುದ । ನೆರಗಲಿ ಮಲ್ಲರೊಪ್ಪಿದರು" (ಕಂನವಿ, ೨೧-೯೧).

ಇದು ಚಾಟು ವಿಠಲನಾಥ ಕೊಡುವ ಮಲ್ಲಯುದ್ಧದ ವರ್ಣನೆ: "ತಳವ ತಳದಲಿ ಹೊಯ್ದು ಭುಜಮಂಡಲವನಾ ಸ್ಫೋಟಿಸಿ ಪರ ಸ್ಪರ । ಲಲಿತಕರಜಾನೂರ ಪಾದದ್ವಿತಯ ಬದ್ಧದಲಿ । ತಳಿಸಿ ತೊಡರುವ ಬೀಸಿಬಿಸುಡುವ। ನಿಲುವನಿಂದಡಿಯಿಂದ ಬಲಿಸುವ। ಹಲವು ಪರಿಯಲಿ ಹಳಚಿ ತಿವಿದಾಡಿದರು ಪಟುಭಟರು" (ಕಚ, ೩, ಪು. ೨೩೪).

ಭೀಮ ಜರಾಸಂಧರ ಮಲ್ಲಯುದ್ಧದ ವರ್ಣನೆಯಲ್ಲಿ ಕುಮಾರ ವ್ಯಾಸ ಜಟ್ಟಿಕಾಳಗದ ಕೆಲವು ಪಟ್ಟುಗಳನ್ನು ಹೇಳಿದ್ದಾನೆ.[61] ಮಲ್ಲರು ತಮ್ಮ ಕೈಯಿಕಾಲುಂಚಳಕಗಳಿಂದ ಹೇಗೆ ಹೋರಾಡುತ್ತಾ

ಪ್ರತಿಸ್ಪರ್ಧಿಯನ್ನು ಚಿತ್ತುಮಾಡುತ್ತಿದ್ದರು ಎಂಬುದರ ನೈಜ ಚಿತ್ರವನ್ನು ಅಲ್ಲಿ ಮೂಡಿಸಿದ್ದಾನೆ :

"ಬಿಡಿಸಿಗಳ ಹತ್ತುವನು (ಕುತ್ತಿಗೆಗೆ ಕೈಹಾಕುವುದು) ಡೊಕ್ಕರ। (ಹೊಡೆತ) ಕೊಡೆಮುರಿವ ಸಕುಟುಂಬ ಡೊಕ್ಕರ । ಕಡಸಿ ಕತ್ತರಿ ಘಟ್ಟಿಸುವ (ಕತ್ತರಿ ಕಾಲು ಹಾಕುವ)ಗಳ ಹತ್ತ ಡೊಕ್ಕರವ । ತಡೆವ ಚೌವಂಗುಲದುವಂಗುಲ । (ನಾಲ್ಕು ಹೆಜ್ಜೆ ಎರಡು ಹೆಜ್ಜೆ ಹಾಕುವುದು) ಕೊಡೆಮುರಿವ ಪಟ್ಟಸಕೆ (ಚಪಗೊಡಲಿಯಂತೆ ಹಾಕುವ ಹಿಡಿತ) ಚಾಚುವ । ಝಡಿತೆಗೊದಗುವ ಭಟರು ಹೆಣಗಿದರು...." (ಗಭಾಸ, ೨-೯೭.)[62]

"ಎಳೆದುದಣುವಟ್ಟೆಯಲಿ ಬೊಪ್ಪರ । ದೊಳಗೆ ಜಾಳಿಸಿ ಚಿಮ್ಮಿರ್ಝಡಿತೆಯು । ಸೆಳೆದು ವೇಡುಹಿನಲೌಕಿ ಬಿಗಿದರು ಪಟ್ಟ ಮುಡುಹಿನಲಿ।ಸುಳಿದುಮರ್ಕಟಬಂಧದಲಿ (ಮಂಗನಂತೆ ಹಾಕುವ ಹಿಡಿತ) ಕರ । ವಳಯದಲಿ ಕೈದುಡುಕಿ ಶಿರವ । ಟ್ಟಳೆಯ ಚಲ್ಲಣ ಪಟ್ಟೆಯವರೊದಗಿದರು ಪಟುಭಟರು." (ಗಭಾಸ, ೨-೯೮).

"ಅಗಡಿಯಯಲಿ ಲೋಟಿಸಿ ನಿರಂತರ । ಲಗಡಿಯಲಿಲಾಗಿಸಿ ನಿಬಂಧದ । ಬಿಗುಹುಗಳ ಕುಮ್ಮರಿಯ ಕುಹರದ ನಾಗಬಂಧಗಳ। ತೆಗಹುಗಳ ತೊಡಕುಗಳ ತುಳುಕಿನ । ಜಗುಳಗಳ ಜೋಡಣೆಯ ನಿಡುಸು । ಯುಲ್ಲಗಳ ಸೌರಂಭದ ಸಗಾಢರು ಹೊಕ್ಕು ಹೆಣಗಿ ದರು." (ಗಭಾಸ. ೨-೯೯)[63]

ಮೇಲಿನ ಮೂರು ಪದ್ಯಗಳು ವೀರಜಟ್ಟಿಗಳ ಕೈಚಳಕವನ್ನೂ, ವಿವಿಧ ಪಟ್ಟುಗಳನ್ನೂ ವಿವರಿಸಿದರೆ, ಮುಂದಿನೆರಡು ಪದ್ಯಗಳು ಆ ಮಲ್ಲಯುದ್ಧದ ತೀವ್ರತೆಯನ್ನೂ ಹೋರಾಟದ ಸ್ವರೂಪ ವನ್ನೂ ತಿಳಿಸುತ್ತದೆ :

"ಧೂಳಿಕುಡಿದುದು ಬೆಮರನಾಕೆಂ । ಧೂಳಿನೆನೆದುದು ಬೆವರಿ

ನಲಿ ತಳ । ಮೇಲು ನಿಮಿಷಕೆ ಮೇಲುತಳ ಬಿಡುಹುಗಳ ಚಿಗುಹು ಗಳ । ಸೂಳುನಾಸಾಪುಟದ ಪವನನ । ತಾಳಿಗೆಯು ಕರ್ಪೂರದ ಕವಳದ । ತೋಳತೆಕ್ಕೆಯು ತವಕಿಗರು ಹೆಣಗಿದರು ಪಟುಭಟರು" (ಗಭಾಸ, ೨–೧೦೦).

"ಕುಸಿದು ಘಾಯುವ ಕಳೆದು ವಕ್ಷದ । ಬೆಸುಗೆ ಬಿಡೆ ಸಿಡಿದೆದ್ದು ಹೊಯ್ಲಿಗೆ । ಮುಸುಡತಿರುಹುವ ಮೈಯನೊಡ್ಡಿದೊಡೌಕಿ ಧಟ್ಟಿಸುವ । ಅಸಮಸೆಗೆ ಮೈಯಳುಕದೆರಗುವ । ಹುಸಿವಜಾರುವ ಹೊಳೆವ ಹಣುಗುವ । ಬೆಸುವ ಬಿಡಿಸುವ ದಿಷ್ಟಿವಾಳರು ಹೊಕ್ಕು ಹೆಣಗಿದರು" (ಗಭಾಸ, ೨, ೧೦೫).

ಮಲ್ಲಯುದ್ಧದಲ್ಲಿ ಬರುವ ಪಾರಿಭಾಷಿಕ ಶಬ್ದಗಳು ಅಪಾರ. ನಿಘಂಟುಗಳು ಕೂಡ ಅವುಗಳ ಅರ್ಥವಿವರಣೆ ಕೊಡಲು ಸಾಧ್ಯ ವಾಗಿಲ್ಲ. 'ಮಲ್ಲಯುದ್ಧದ ಒಂದುಪಟ್ಟು', 'ಕತ್ತಿವರಿಸೆಯ ಒಂದು ವಿಧ' ಎಂದು ಅಷ್ಟು ಮಾತ್ರ ಹೇಳುತ್ತವೆ. ಅದಕ್ಕೂ ಹೆಚ್ಚಿನ ಗೂಢಾರ್ಥ ಆ ಪದಗಳಲ್ಲಿ ಅಡಗಿದೆ. ಆ ಅರ್ಥವನ್ನು ಕವಿಗಳು ಕೊಡುವ ವರ್ಣನೆಯನ್ನು ಇತರ ಅಂತಹುದೇ ವರ್ಣನೆ ಗಳೊಂದಿಗೆ ಹೋಲಿಸಿ ಅರ್ಥವನ್ನು ಸ್ಪಷ್ಟಪಡಿಸಬೇಕಾಗುತ್ತದೆ. ಇದು ನಿಜಕ್ಕೂ ಕಷ್ಟದ ಕೆಲಸ. ಕುಮಾರವ್ಯಾಸ ಕೊಡುವ ಮಲ್ಲ ಯುದ್ಧದ ವರ್ಣನೆಯಲ್ಲೆ ಸಾಕಷ್ಟು ಪಾರಿಭಾಷಿಕ ಶಬ್ದಗಳಿವೆ, ಜೊತೆಗೆ ಇನ್ನೂ ಕೆಲವು ಕಾವ್ಯಗಳಲ್ಲಿ ದೊರೆತ ಕೆಲವು ಪಾರಿಭಾಷಿಕ ಶಬ್ದಗಳನ್ನೂ ಮುಂದೆ ಅವುಗಳ ಪ್ರಯೋಗದೊಂದಿಗೆ ಕೊಟ್ಟಿದೆ. ಪಾರಿಭಾಷಿಕ ಶಬ್ದಗಳಿಂದ ಕಿಕ್ಕಿರಿದ ಆ ಕಿರುವರ್ಣನೆಗಳಲ್ಲಿ ಮಲ್ಲ ಯುದ್ಧದ ಸ್ವರೂಪವನ್ನು ಮೆಲುಕು ಹಾಕಬಹುದು.

**ಡೊಕ್ಕರ**

'ಜಟ್ಟಿಗರ ಡೊಕ್ಕರಂಗಳ ಹತ್ತುಂ ಮೊದಲೆನಿಸಿದ ಪಲವುಂಪಟ್ಟು

ಗಳ್ ' (ಮರಾಚ, ೨೦೭-೪೯) ಇಲ್ಲಿ ಡೊಕ್ಕರ ಎನ್ನುವುದಕ್ಕೆ ಮಲ್ಲ ಯುದ್ಧದ ಪಟ್ಟು ಎನ್ನುವುದರ ಸ್ಪಷ್ಟ ವಿವರಣೆ ಇದೆ.

"ಆಂ ಪಿಡಿದುದೆ ಕತ್ತರಂ ಕರವಳಂ ಸೆರವಟ್ಟಣೆ ಹತ್ತೆಡೊಕ್ಕರಂ...ಮುಹಡಂದಣುವಟ್ಟಿ ಪಟ್ಟಿಸಂ ಎಂದು ಮಲ್ಲಮಾತಂ ಮಾಡಿ " (ಅನಂಪು, ೨-೨೭) ಇಲ್ಲಿ ಮಲ್ಲ ಮಾತಂ ಮಾಡಿ ಎನ್ನುವುದು ಗಮನಾರ್ಹ. ಇದು ಬಹುಶಃ ಮಲ್ಲಯುದ್ಧದ ನಿಯಮವನ್ನು ಪಾರಿಭಾಷಿಕ ಶಬ್ದಗಳಲ್ಲಿ ಹೇಳಿದಂತಿದೆ.

**ತಿರುಣೆ**

(ಮಲ್ಲಯುದ್ಧದವರಸೆ) "ತಿರುಣಿ ಕುಳಾಡೆ ಬಾಹುಗೆಣೆ ಸಂದಸು ಭಾಹುಡೆ...ಕತ್ತರಗಳೆನಿಪ್ಪ ಜಟ್ಟಿಗರ ಬಿನ್ನಣ ಮೊಪ್ಪೆ ಕಡಂಗಿ ಕಾದಿದರ್ " (ತ್ರಿಪುವಿ, ೨೬-೧೮).

**ತುಳಾಡಿ**

"ರಡಕಿ ಕಕ್ಕವಡಂಮಹಡಂತುಳಾಡಿ ಸಂದಸುಂವಿಡಿವಟ್ಟಸಂಗಂಣವಳುಂಬುಗೆ....ಎನಿಪ್ಪ ಜಟ್ಟಿಗನ ನೆಚ್ಚಿನ ಬಿನ್ನಣವೊಪ್ಪೆ ಕಾದಿದರ್ " (ಚಂದ್ರಪ್ರ, ೫-೭೮).

"ಚಡಿಕೆ ತುಳಾಡಿ ಪೊಟ್ಟ ಮುಡುಹಂ ದಣುವಟ್ಟಿ ಪಟ್ಟಸಂ ಎಂದು ಮಲ್ಲಮಾತಂಮಾಡಿ " (ಅನಂಪು, ೨-೨೭).

**ಕಕ್ಕವಡ**

ಎದುರಾಳಿಯ ಸೊಂಟವನ್ನು ಎರಡು ತೊಡೆಗಳ ನಡುವೆ ಸಿಕ್ಕಿಸಿಕೊಂಡು ಪಾದಗಳನ್ನು ಕಂಕಂಳುಗಳಿಗೆ ಅನಿಸಿ ಎದುರಾಳಿಯ ಒಂದು ಪಾದವನ್ನು ತಿರುಚಿ ಹಿಂಸಿಸುವುದು (ಕಕನಿ, ೨-೧೩೬೨).

"ಕಮ್ಮರಿ ಮುಹುಡಂ ಜವತ್ಸವಡಿ ಪಾಸಗೆ ಕಕ್ಕವಡುಮ್ಮ

ಹಗ್ಗ ಮಂತರಲಗಡಂ...ಎನಿಪ್ಪ ಜಟ್ಟಿಗರ ಬಿನ್ನಣವೊಪ್ಪೆ ಕಡಂಗಿ ಕಾದಿದರ್" (ತ್ರಿಪುವಿ, ೨೬–೧೮).

"ಎಸೆವ ಮುಹಗ್ಗಳಂ ಠಡಕಿ ಕಕ್ಷವಡಂ ಮುಂಹಡಂ ತುಳಾಡಿ ....ಎನಿಪ್ಪ ಜಟ್ಟಿಗನ ನಚ್ಚಿನ ಬಿನ್ನಣವೊಪ್ಪೆ" (ಚಂದ್ರಪ್ರ, ೫–೭೮).

"ಅದಟೆಂದಂ ಮೂಱುಂಲಗ್ಗದ ನಾಲ್ಕುಸ್ಥಾನ ಮಯ್ದುಡೊ ಕ್ಕರದ ಮಹೋಗ್ರದ ಮೂವತ್ತೆರಡು ಬಿನ್ನಣದೊದವಂ ಪಲ ತೆಱದ ಪಾತಮುಂನೆಱೆಮೆಱೆದರ್" (ತ್ರಿಪುವಿ.)

**ಅಂಕುಶ**

(ಮಲ್ಲಯುದ್ಧದ ಪಟ್ಟು. ಕಕನಿ, ೧–೬). "ಬಾಹುದಣಿ ಖಿಮ್ಮರಿ ಕತ್ತರಿ ಖೋಡವಂಕುಶಸಸಿಕುಂವೆನಿಪ್ಪ ಜಟ್ಟಿಗನನಚ್ಚಿನ ಬಿನ್ನಣವೊಪ್ಪೆಕಾದಿದರ್" (ಚಂದ್ರ ಪ್ರ, ೫–೭೮).

**ಅಂತರಲಗಡ**

(ಜಟ್ಟಿವರಸೆಗಳಲ್ಲಿ ಒಂದು) ಕಕನಿ, 'ಪೊಸಗೆ ಕಕ್ಕವಡುಮ್ಮೃ ಹೃಗ್ಗ ಮಂತರಲಗಡಂ....ಪಟ್ಟಿ ಕತ್ತರಗಳೆನಿಪ್ಪ ಜಟ್ಟಿಗರಬಿನ್ನಣ ವೊಪ್ಪೆಕಂಡಂಗಿಕಾದಿದರ್" (ತ್ರಿಪುವಿ, ೨೬–೧೮).

**ತಳಪಟ್ಟು**

(ಕೆಳಗಿನಿಂದ ಹಿಡಿಯುವ ಕುಸ್ತಿಯ ಒಂದುಪಟ್ಟು, ಕಕನಿ, ೩–೩೩೭೪) "ಜಡೆಯೆಂಬುದುಗೊರವಂಗೆ ತಟ್ಟೆಂಬುದು ಸವಣಂಗೆ ತಳಪಟ್ಟೆಂಬುದು ಹೊಲ್ವಂಗಲ್ಲದೆ ಕೊಲ್ವಗೆಲ್ವಗಲಿಗಂ ಬಿರುದಂಗ ವೇವುದು. (ಅಸಂಪು, ೨–೮೮ ವ).

ಗೋಣಿ

(ಜಟ್ಟಿಕಾಳಗದಲ್ಲಿ ಒಂದು ವರಸೆ) "ಸಂದ ಕೊಕ್ಕಸಗುಂಡು ಗೋಣಿಯುವಿಂದೆ ಪಟ್ಟ ಸುಚೇಣ ಪಟ್ಟಸುವೆಂದೆನಿಪ ವಿಂದಾಣ ದಲಿ ಕಾದಿದರು ಜಟ್ಟಿಗಳು" (ಸಾಳ್ವಭಾ, ೨೨-೭೨).

ತೀವ್ರಸ್ವರೂಪದಲ್ಲಿ ನಡೆಯುತ್ತಿದ್ದ ಮಲ್ಲಯುದ್ಧಗಳು, ಮಲ್ಲರ ಕೈಚಳಕ (ಪಟ್ಟುಗಳು) ಪ್ರೇಕ್ಷಕರಿಂದ ಪ್ರಶಂಸೆ-ಮುಂತಾದುವು ಗಳನ್ನು ಕುರಿತು ಕವಿಗಳು ನೀಡಿರುವ ವರ್ಣನೆಗೆ ಪ್ರವಾಸಿಗಳ ವರದಿಯಲ್ಲಿ ಸಾಕ್ಷ್ಯದೊರೆಯುತ್ತದೆ. ಮಹಾನವಮಿಯ ಉತ್ಸವವನ್ನು ವರ್ಣಿಸುತ್ತ ನ್ಯೂನಿಜ್ 'ರಾಜನು ಈ ಒಂದು ಹಬ್ಬದ ಸಂದರ್ಭದಲ್ಲಿ ಏರ್ಪಡುವ ಮಲ್ಲಯುದ್ಧದಲ್ಲಿ ಭಾಗ ವಹಿಸಿ ಹೋರಾಡಲೆಂದೇ ಒಂದು ಸಾವಿರ ಜಟ್ಟಿಗಳನ್ನು ಹೊಂದಿ ದ್ದಾನೆಂದು ಹೇಳಿ,[64] ಅವರ ಹೋರಾಟ ಹೇಗೆ ಕೆಲವು ಸಮಯ ಗಳಲ್ಲಿ ಉಗ್ರಸ್ವರೂಪವನ್ನು ತಾಳುತ್ತಿತ್ತು ಎಂದು ಹೇಳುತ್ತಾನೆ. ಪಾಯೇಸನ ಹೇಳಿಕೆಯನ್ನು[65] ನ್ಯೂನಿಜ್ ಸಮರ್ಥಿಸುತ್ತಾನೆ. ಕ್ಯಾಸ್ತನ್ ಹೆಡ ಎಂಬ ಚರಿತ್ರಕಾರ ೧೬ನೆ ಶ. ದಲ್ಲಿ ವಿಜಯನಗರ ದಲ್ಲಿ ನಡೆಯುತ್ತಿದ್ದ ಮಲ್ಲಯುದ್ಧವನ್ನು ಪ್ರಸ್ತಾಪಿಸುತ್ತಾ ಹೆಂಗಸರ ಮೇಲಿನ ಒಲುವಿನಿಂದ ಅನೇಕ ಮಲ್ಲಯುದ್ಧಗಳು ನಡೆದು ಅನೇಕರು ಪ್ರಾಣ ಕಳೆದುಕೊಂಡಿದ್ದಾರೆ[66] ಎಂದು ಹೇಳುವನು. ಜಟ್ಟೀಕಾಳಗದಲ್ಲಿ ಮಡಿದ ವೀರರ ಸ್ಮಾರಕಗಳು ಅನೇಕವಿವೆ.[67] ಪ್ರಾಂತೀಯ ರಾಜಧಾನಿಗಳಲ್ಲಿ ಕುಸ್ತಿ ಅಖಾಡಾಗಳ ಅವಶೇಷ ಗಳಿವೆ. ತಂಜಾಊರಿನಲ್ಲಿ ಒಂದು ವ್ಯಾಯಾಮಶಾಲೆ ಇತ್ತೆಂದು ಹೇಳುವರು.[68] ಹೀಗೆ ಮಲ್ಲಯುದ್ಧದ ವಿಷಯವಾಗಿ ಅನೇಕ ಸ್ವಾರಸ್ಯವಾದ ವಿಷಯಗಳು ಅನೇಕ ಮೂಲಗಳಿಂದ ತಿಳಿದು ಬರುತ್ತವೆ.

**ಖಡ್ಗಯುದ್ಧ**

ಶೌರ್ಯಸಾಹಸ ಪ್ರದರ್ಶನಗಳಲ್ಲಿ ಮಲ್ಲಯುದ್ಧದಂತೆ ಖಡ್ಗ ಯುದ್ಧ ಪ್ರದರ್ಶನವೂ ಒಂದು. ಖಡ್ಗಯುದ್ಧ ಪ್ರದರ್ಶನದಲ್ಲಿ ತಮ್ಮ ವಿಕ್ರಮವನ್ನು ಮೆರೆದ ಕಠಾರಿವೀರರ ವೃತ್ತಾಂತ ಇತಿಹಾಸ ದುದ್ದಕ್ಕೂ ದೊರೆಯುತ್ತದೆ. ರಾಜಸಭೆಗೆ ಬರುತ್ತಿದ್ದ ನಾನಾ ವೃತ್ತಿಯವರಲ್ಲಿ ಮಲ್ಲರೂ ಕಠಾರಿವೀರರೂ ಇರುತ್ತಿದ್ದರೆಂದೂ, ಅವರ ಕೇರಿಯೇ ಇರುತ್ತಿತ್ತೆಂದೂ ಕವಿಗಳ ರಾಜಸಭೆಯ ವರ್ಣನೆ ಗಳಿಂದ ತಿಳಿದುಬರುತ್ತದೆ.[69]

ರಾಜಸಭೆಗಳ ಮುಂದೆ ಹಾಗೂ ಸಾರ್ವಜನಿಕವಾಗಿ ಮಲ್ಲ ಯುದ್ಧ ಪ್ರದರ್ಶನಗಳು ನಡೆದ ವಿಚಾರವನ್ನು ನಮ್ಮ ಕವಿಗಳು ಅಲ್ಲಲ್ಲಿ ಹೇಳಿ ಅವುಗಳು ನಡೆದ ರೀತಿಯನ್ನು ಮನೋಜ್ಞವಾಗಿ ಬಣ್ಣಿಸಿದರೂ, ಖಡ್ಗಯುದ್ಧ ಪ್ರದರ್ಶನಗಳು ಅಷ್ಟಾಗಿ ಕವಿಗಳ ಮನಸೆಳದಂತೆ ಕಾಣುವುದಿಲ್ಲ (?) ಆದರೂ ಅಲ್ಲೊಮ್ಮೆ ಇಲ್ಲೊಮ್ಮೆ ಒಂದೆರಡು ಚಿತ್ರಗಳು ತಮ್ಮ ಸುಳುಹಂ ದೋರುತ್ತವೆ. ಉದಾಹರಣೆಗೆ ನಾರಣಪ್ಪ ಆದಿಪರ್ವದಲ್ಲಿ ಕುರು ಪಾಂಡವರ ಶಸ್ತ್ರವಿದ್ಯಾ ಪ್ರದರ್ಶನದ ವೈಭವದ ವರ್ಣನೆಯನ್ನು ಕೊಡುವಾಗ ಕೌರವನ ಖಡ್ಗವಿದ್ಯಾ ಪ್ರದರ್ಶನವನ್ನು ಹೀಗೆ ಬಣ್ಣಿಸುತ್ತಾನೆ :

"ಬವರಿಯಲಿ ಪಯಪಾಡಿನಲಿಮೈ । ಲವಣೆಯಲಿ ಬಿನ್ನಾಣ ದಲಿಭಾ । ರವಣೆಯಲಿ ದೆಖ್ಖಾಳದಲಿ ವೇಗ್ಗಾಯರೇಖೆಯಲಿ । ತಿವಿವವೊನೆಯೊಂದರಲಿನೂರಂ । ಗವನುತೋರ್ಪ ವಿಭೇದ ದಲಿ ಕೌ । ರವಮಹೀಪತಿತೋರಿದನು ಶ್ರಮವನು ಕಠಾರಿಯಲಿ" (ಗಭಾಆ, ೭–೨೮)[70] ಕುರುಪಾಂಡವರ ಶಸ್ತ್ರವಿದ್ಯಾ ಪ್ರದರ್ಶನ ವನ್ನು ವರ್ಣಿಸುವಾಗ ನಾರಣಪ್ಪ ನವೀನತೆಯನ್ನು ತೋರಿದ್ದಾನೆ.

ಅವನು ಕೊಡುವ ಚಿತ್ರಗಳು ಕೇವಲ ವ್ಯಾಸಭಾರತದ ಪಡಿಯು ಚ್ಚಲ್ಲ. ಕವಿಯ ಕಾವ್ಯದಲ್ಲಿ ಸಮಕಾಲೀನ ಪ್ರಜ್ಞೆ ಮನವೋಹಕ ವಾಗಿ ಮೂಡಿಬಂದು ಅಲ್ಲಿ ತಾನು ಕಂಡ ಸುತ್ತಮುತ್ತಲಿನ ಜನತೆಯ ನಾಡಿಮಿಡಿತದ ತಾಡನವಿದೆ.

ಲಿಂಗಣ್ಣಕವಿಯ 'ಕೆಳದಿ ನೃಪವಿಜಯ' ದ ಮೂರನೇ ಆಶ್ವಾಸ ದಲ್ಲಿ ಖಡ್ಗಯುದ್ಧದ ಒಂದು ಸೊಗಸಾದ ಚಿತ್ರವಿದೆ. ಅಲ್ಲಿ ಬರುವ ವೀರೋಚಿತ ಪ್ರಸಂಗದಿಂದ ಆಗಿನ ಕಾಲಕ್ಕೆ ದೇಶದ ನಾನಾ ಕಡೆಗಳಲ್ಲಿ ಕಠಾರಿವೀರರಿದ್ದು, ತಮ್ಮ ಅಸೀಮಸಾಧನೆ ಸಾಹಸ ಗಳಿಂದ ಖ್ಯಾತಿ ಗಳಿಸಿ, ಆಗಾಗ ತಮ್ಮ ಶಕ್ತಿಸಾಹಸ ಪ್ರದರ್ಶನಗಳ ಪರೀಕ್ಷೆಗೆ ಸವಾಲೊಡ್ಡುತ್ತಿದ್ದರೆಂಬ ಅಂಶ ವಿದಿತವಾಗುತ್ತದೆ.

ಸದಾಶಿವನಾಯಕನ ಮಗ ದೊಡ್ಡಸಂಕಣ್ಣನಾಯಕ ದೇಶಾಟನೆ ಕೈಗೊಂಡು ದೆಹಲಿಯ ಬಳಿ ಬಂದಾಗ ರಾಜದ್ವಾರದ ಮುಂದೆ ಬಿರಂದುಸಹಿತವಾಗಿ ಕಟ್ಟಿದ ಹರಿತವಾದ ಖಡ್ಗವನ್ನು ನೋಡಿ ತಲೆದೂಗಿ ವಿಸ್ಮಯಗೊಂಡನು. ಅಂಕುಶಖಾನನೆಂಬ ಪರಾ ಕ್ರಮಶಾಲಿಯಾದ ಒಬ್ಬ ಮಂತ್ರಿಶ್ರೇಷ್ಠನಿದ್ದಾನೆ. ಅವನು ಒಂಟಿ ಗತ್ತಿ ಕಾಳಗದಲ್ಲಿ ನನ್ನನ್ನು ಎದುರಿಸಿ ನಿಲ್ಲತಕ್ಕವರು ಯಾರೂ ಇಲ್ಲ. ನನ್ನ ಮೇಲೆ ಯುದ್ಧಕ್ಕೆ ನಿಲ್ಲುವ ಸಮರ್ಥರಿದ್ದರೆ ಈ ಖಡ್ಗವನ್ನು ಬಿಚ್ಚಲಿ" ಎಂದು ಸೂಚಿಸಿ ಆ ಖಡ್ಗವನ್ನು ಕಟ್ಟಿಸಿದ್ದನು. "ಅಂಕುಶಖಾನನೆಂಬತಿ ಪರಾಕ್ರಮಶಾಲಿ ವಜೀರವರ್ಯನಾರುಂ। ಕರವೊಂಟಿಗಳ್ತಿಯ ಸಮೀಕದೊಳೆನ್ನೊಳಿದಿರ್ಚಿನಿಲ್ವರಿ। ಲ್ಲಂಕ ದೊಳಾಂತು ನಿಲ್ವದಟನುಳ್ಳೊಡೆ ಬಾಳನಿದಂ ಕಳಲ್ಚಲೆಂ। ದಂಕಿತಗೈದು ಕಟ್ಟಿಹನ್...." (ಕೆಳದಿ, ೩-೧೪).

ವೀರಸಂಕಣ್ಣನಾಯಕ ಆ ಕತ್ತಿಯನ್ನು ಕಳಚಿ ತೆಗೆಸಿ, ಮುಂದೆ ಅಂಕುಶಖಾನನನ್ನು ಎದುರಿಸಿ ಖಾಡಾ ಖಾಡಿಯಾಗಿ ಹೋರಾಡಿ

ನೆರೆದವರನ್ನೆಲ್ಲ ವಿಸ್ಮಯಗೊಳಿಸುವ ರೀತಿಯಲ್ಲಿ ಖಾನನನ್ನು ಖಡ್ಗದಿಂದ ಇರಿದುಕೊಂದನು. ಲಿಂಗಣ್ಣಕವಿ ಈ ವಿಷಯವನ್ನು ಬಹು ಚಮತ್ಕಾರವಾಗಿ ವೀರ್ಯವತ್ತಾಗಿ ಹಲವಾರು ಪದ್ಯಗಳಲ್ಲಿ ವರ್ಣಿಸಿದ್ದಾನೆ. ಮೂರನೆ ಅಧ್ಯಾಯದ ಬಹುಪಾಲು ಪದ್ಯಗಳು ಈ ಖಡ್ಗಯುದ್ಧ ಪ್ರಕರಣಕ್ಕೆ ಮೀಸಲಾದಂತಿವೆ.

ದೆಹಲಿ ಬಾದಷಹನ ಸಮ್ಮುಖದಲ್ಲೇ ಈ ವೀರರಿಬ್ಬರ ಖಡ್ಗಯುದ್ಧ ಪ್ರದರ್ಶನ ನಡೆಯುತ್ತದೆ. ಬರಿಗೈಯಲ್ಲಿದ್ದ ಸಂಕಣ್ಣನಾಯಕನಿಗೆ ತಾನೇ ಕತ್ತಿಯನ್ನು ತರಿಸಿಕೊಡುತ್ತಾನೆ. ನಾಯಕ ಪ್ರಾಯೋಗಿಕವಾಗಿ ಝಳಿಪಿಸಿ ನೋಡುವುದರಲ್ಲೆ ೧೨ ಕತ್ತಿಗಳು ತುಂಡುತುಂಡಾದವು. ಕಡೆಗೆ ಬಾದಷಹ ತನ್ನ ಪಟ್ಟದ ಕತ್ತಿಯನ್ನೇ ನೀಡಲು ಮುಂದಾಗಲು, ನಾಯಕ ಅದನ್ನು ತುಂಡು ಮಾಡಲು ಇಷ್ಟಪಡದೆ. ತನ್ನ ಕಟಿ ಪ್ರದೇಶದಲ್ಲಿ ಕಟ್ಟಿ ಬಟ್ಟೆಯಲ್ಲಿ ಸುತ್ತಿದ್ದ 'ನಾಗರಮುರಿ' ಎಂಬ ಕತ್ತಿಯನ್ನು ಹೊರತೆಗೆದು ಖಡ್ಗ ಯುದ್ಧಕ್ಕೆ ನಿಂತನು. (೩–೧೯ (ವ) ).

ಮುಂದೆಲ್ಲ ಸುಮಾರು ೨೦ ಪದ್ಯಗಳಲ್ಲಿ ದೀರ್ಘವಚನಗಳಲ್ಲಿ ಖಡ್ಗಯುದ್ಧದ ಹೋರಾಟದ ವೈಖರಿಯನ್ನು ಕವಿ ಬಣ್ಣಿಸು ತ್ತಾನೆ. (೩–೨೧ ರಿಂದ ೪೦ ವಚನ ಪೂರ್ತಿ.). ಹೋರಾಟದ ಭಯಂಕರ ಸ್ವರೂಪ, ಅವರು ತೋರುತ್ತಿದ್ದ ಕೈಚಳಕ. ಪಟ್ಟುಗಳು, ಆಕ್ರಮಣ ರೀತಿ ಇವುಗಳೊಂದೊಂದೂ ನೈಜವಾಗಿ ಮೂಡಿ ಬಂದು. ಖಡ್ಗಯುದ್ಧದ ಒಂದು ಜೀವಂತ ಚಿತ್ರವನ್ನೇ ಕವಿ ನಮ್ಮ ಮುಂದಿಡುತ್ತಾನೆ. ಉದಾಹರಣೆಗೆ ಕೆಲವನ್ನು ನೋಡಬಹುದು:

" ಹೊಂಚಿಮುನ್ನುಗ್ಗುವ, ತಿಕ್ಕಾಡುವ ಆ ಭಟರ ರೀತಿಯನ್ನು ಏನು ವರ್ಣಿಸಲಿ ? ಝಳಪ, ಚೂರಣ, ಅಂಕೆ, ಒಡ್ಡಣೆ, ಏವಾರ್ರೆ, ವೊಯ್ಲು, ಕಂಡಣೆ, ಸಿಕ್ಕುಸವರ್ಕೆ-ಮುಂತಾದ ಯುದ್ಧದ

ಪಟ್ಟುಗಳಿಂದ ಅವರು ಹೋರಾಡಿದರು. (೩–೨೮) : ಆಗ ದಂಡೆ ಮುರುಹೋದವು. ಪೈಸರ, ಮಂಡಲ, ಸಮಚಾಲಿ, ಲಾಗು, ಲಂಘನ, ಒಳ್ಮಂಡಿ, ಅಭಿಮುಖ–ಎಂಬ ವಿವಿಧ ಯುದ್ಧಭಂಗಿ ಗಳನ್ನು ಕೈಗೊಂಡು ಖಾಡಾಖಾಡಿಯಾಗಿ ಹೋರಾಡಿದರು. (೩–೨೯) ;

ಅವಕಾಶ ನೋಡಿ ಒಳ್ಳೆಯ ರೀತಿಯಿಂದ ಮುನ್ನುಗ್ಗುವ ಹಿಂದಕ್ಕೆ ಬರುವ, ಕಾದಾಡುವ, ನಿಲ್ಲುವ, ಕೈಮಾಡುವ, ಏಟು ಗಳನ್ನು ತಪ್ಪಿಸುವ, ರಕ್ಷಿಸುವ, ತರಿಯುವ, ಸಡಿಲಿಸುವ, ಹೆಜ್ಜೆ ಯಿಡುತ್ತಾ ಒತ್ತಿಹೋಗಲಾಡಿಸುವ, ಹೋಗುವ, ಬರುವ, ಕತ್ತಿಗೆ ಕತ್ತಿಯನ್ನೊಡ್ಡುವ, ತೇಲಾಡುವ ಪ್ರೌಢಿಮೆಯನ್ನು ತೋರುತ್ತಾ ಅವರು ಹೋರಾಡಿದರು. “ ಪಾಡರಿದೊಪ್ಪದಿಂ ಪೊಗುವ ಪಿಂಗುವ ಪಿಂದೆಗೆವಾಂಪನಿಲ್ವ ಕೈ । ಮಾಡುವ ಪೊಯ್ಲ್ಗಳಿಂ ಕಳೆವ ಕಾಯ್ವ ತೆರಳ್ವ ಸಡಿಲ್ವ ಪಜ್ಜೆಗೊಂ । ಡೀಡಿಂದೊತ್ತುತೊತ್ತರಿಪ ಪೊಂಗುವ ಸಾರ್ವ ಮರಳ್ವ ಬಾಳ್ಗೆ ಬಾ । ಳ್ಗೂಡುವ ತೇಲ್ವ ಬಿನ್ನಣಗಳೊಪ್ಪೆಪಳಂಚಿದರಾಜಿರಂಗದೊಳ್ ” (೩–೩೦.)

ತಟ್ಟುವ, ತಡೆಯುವ, ಖಡ್ಗವನ್ನು ಮುಟ್ಟುವ, ಹರಿತಗೊಳಿ ಸುವ, ತಾಳುವ, ಪರಿಶೀಲಿಸುವ, ಪರಾಕ್ರಮದಿಂದ ಹಿಂಜರಿವ ಅನೇಕ ಕ್ರಮದ ಪಟ್ಟುಗಳನ್ನು ಕ್ರಮವಾಗಿ ತೋರಿಸುತ್ತಾ ಹೋರಾಡಿದರು.

ಅಷ್ಟೇ ಅಲ್ಲದೆ ಆ ವೀರರು ಚಮತ್ಕಾರದಿಂದ ತಮ್ಮ ಪ್ರಾಣ ರಕ್ಷಣೆ ಮಾಡಿಕೊಳ್ಳುತ್ತಾ ‘ ತಾಗುವ, ತರಿಯುವ, ನುಗ್ಗುವ, ಬೇರ್ಪಡುವ, ಪಕ್ಕಕ್ಕೆ ಸರಿಯುವ, ಮುಂಚಬ್ಬುವ, ಕೂಡುವ, ಸಡಿಲುವ, ಎಡೆಯಾಗುವ, ಕೈಮಾಡಿ ಹಿಗ್ಗುವ ರೀತಿಯಲ್ಲಿ ಚಮ ತ್ಕಾರದಿಂದ ಕೂಡಿರುವಂತೆ ಸೆಣಸಿದರು. (೩–೩೨) ಇಬ್ಬರೂ

ಸಾವದವರೆಗೆ ಹೋರಾಡಿದರೂ ತೀರ್ಮಾನವಾಗದಿರಲು ಅಂಕುಶ ಖಾನ ಮತ್ತೊಂದು ಸಲಹೆ ನೀಡಿದ. (೩೩-(ವ)) ಅದರಂತೆ ಎರಡನೆ ಸುತ್ತಿನ ಹೋರಾಟ ನಡೆದು, ಕಡೆಗೆ ನೆರದವರೊಬ್ಬರಿಗೂ ಅಂಕುಶಖಾನ ಸತ್ತಿದ್ದಾನೆ. ಎಂಬುದರ ಅರಿವಾಗದಂತೆ ಅವನ ಸೊಂಟವನ್ನು ಕತ್ತರಿಸಿದ್ದನು. ಖಾನ ನಿಂತಂತೆಯೇ ನಿಂತಿದ್ದಾನೆ! ಇನ್ನೂ ಹೋರಾಡಲಿರುವಂತೆ ಭ್ರಮೆ ತೋರುತ್ತಿದ್ದಾನೆ! ಕಡೆಗೆ ಎಲ್ಲರಿಗೂ ಈ ಇಬ್ಬರು ವೀರರ ಹೋರಾಟ ಏಕೆ ನಿಂತಿತು ಎಂದು ವಿಸ್ಮಯವಾಗಿದ್ದಾಗ 'ಹೆಣನಕೂಡ ಯಾವರೀತಿ ಯುದ್ಧಮಾಡು ವುದು' ಎಂದು ಸಂಕಣ್ಣನಾಯಕ, ಎಲ್ಲರೆದುರಿನಲ್ಲೆ ತಾನು ಹಿಡಿದ ಕತ್ತಿಯನ್ನು ಅಂಕುಶಖಾನನ ಎದೆಗೆ ಮುಟ್ಟಿಸಲು, ಆಗ ಸೊಂಟದ ಮೇಲಿನ ತುಂಡು ಚೂರುಮಾಡಿದ ಬಾಳೆಯ ದಿಂಡಿನಂತೆ ನೆಲಕ್ಕುರುಳಿತು. (೩-೪೦ (ವ)).

ಹೀಗೆ ಲಿಂಗಣ್ಣ ಕವಿ ಸಂಕಣ್ಣನಾಯಕನಿಗೂ, ಅಂಕುಶ ಖಾನನಿಗೂ, ದೆಹಲಿಯಲ್ಲಿ ಬಾದಷಹನ ಮುಂದೆ ನಡೆದ ವೀರ್ಯ ವತ್ತಾದ ವೀರರಿಬ್ಬರ ಖಡ್ಗದ ಕಾಳಗವನ್ನು ಭಾವಪೂರ್ಣವಾಗಿ ವರ್ಣಿಸಿದ್ದಾನೆ. ಈ ಘಟನೆಯನ್ನು ಕೂಡ ಕವಿಯ ವರ್ಣನೆ, ಉತ್ಪ್ರೇಕ್ಷೆ ಎಂದು ತಳ್ಳಿಹಾಕುವಂತಿಲ್ಲ. 'ಕರ್ನಾಟಕದ ಅದರಲ್ಲೂ ದೇಶೀಯ ಕೃತಿಗಳಲ್ಲಿ ಕೆಳದಿ ಸಂಸ್ಥಾನದ, ಅರಸರ ವಿಜಯಗಳನ್ನು ವರ್ಣಿಸುವ 'ಕೆಳದಿನೃಪವಿಜಯ'ವು ಒಂದು ಗಮನಾರ್ಹ ಕೃತಿ. ಇದು 'ಕಂಠೀರವ ನರಸರಾಜ ವಿಜಯ' ಹಾಗೂ 'ಚಿಕ್ಕದೇವ ರಾಜವಂಶಾವಳಿಗಳಂತೆ ಐತಿಹಾಸಿಕ ಪ್ರಾಮುಖ್ಯ ಉಳ್ಳದ್ದು' ಎಂದು ಹೇಳಿರುವ ವಿಮರ್ಶಕರ ಮಾತನ್ನು ಈ ಸಂದರ್ಭದಲ್ಲಿ ಮರೆಯುವಂತಿಲ್ಲ. (ನೋಡಿ, ಕರ್ಣಾಟಕ ಪರಂಪರೆ, ಸಂ. ೨, ಪು. ೨೮೮) ಎ. ಆರ್. ಕೃಷ್ಣಶಾಸ್ತ್ರಿಗಳು ಕೂಡ, 'ಈ ಕೃತಿಯು

ಇತಿಹಾಸಜ್ಞರಿಗೆ ಮಹತ್ವಪೂರ್ಣ ಆಕರ ಗ್ರಂಥ. ಇದರಲ್ಲಿ ಕಾವ್ಯಾಂಶಗಳಿಗಿಂತಲೂ ಚಾರಿತ್ರಿಕಾಂಶಗಳೇ ಹೆಚ್ಚಾಗಿವೆ' ಎಂದಿದ್ದಾರೆ.

ಉಳಿದ ವಿಚಾರಗಳು ಏನೇ ಇರಲಿ, ಕೆಳದಿನೃಪವಿಜಯದ ೩ನೇ ಅಧ್ಯಾಯದಲ್ಲಿ ಬರುವ ವೀರರಿಬ್ಬರ ಖಡ್ಗಯುದ್ಧದ ಸವಾಲಿನ ಚಿತ್ರ ಆಗಿನ ಕಾಲದಲ್ಲಿ ನಡೆಯುತ್ತಿದ್ದ ಖಡ್ಗಯುದ್ಧ ಹಾಗೂ ಅದರ ಹೋರಾಟದ ಬಿರುಸಿನ ಸಜೀವಚಿತ್ರ ಎನ್ನಲಡ್ಡಿಯಿಲ್ಲ.

## ಬೆಂಕಿಯ ಪ್ರದರ್ಶನ

ವಿಶೇಷ ಸಂದರ್ಭಗಳಲ್ಲಿ ಏರ್ಪಡಿಸುವ ಇಂತಹ ವಿನೋದ ಪ್ರದರ್ಶನಗಳಲ್ಲಿ ಕಡೆಗೆ ಬಹಳಮಟ್ಟಿಗೆ ಅಂದಿನ ಕಾರ್ಯಕ್ರಮದ ಮುಕ್ತಾಯವನ್ನು ಸೂಚಿಸುವಂತೆ ಬಾಣಬಿರುಸುಗಳು ಇರುತ್ತಿದ್ದವು. ಈಗಲೂ ಇದೆ.

ಸಿಡಿಮದ್ದು ಹಾಗು ಬೆಂಕಿಯ ಪ್ರದರ್ಶನಗಳು ನಮ್ಮ ದೇಶದಲ್ಲಿ ಎಂದಿನಿಂದ ಬಳಕೆಯಲ್ಲಿದ್ದವು ಎಂಬುದರ ಬಗೆಗೆ ವಿದ್ವಾಂಸರಲ್ಲಿ ಇನ್ನೂ ವಾದ ವಿವಾದಗಳು ನಡೆಯುತ್ತಲೇ ಇವೆ. ಕ್ರಿ.ಶ. ೧೪೦೦ರ ನಂತರವೇ ಭಾರತದಲ್ಲಿ ಸಿಡಿಮದ್ದನ್ನು ಯುದ್ಧದಲ್ಲೂ, ಬೆಂಕಿ ಪ್ರದರ್ಶನಗಳನ್ನು (fire works) ಸಮಾರಂಭಗಳಲ್ಲೂ ಉಪಯೋಗಿಸುತ್ತಿದ್ದರೆಂದು ವಿದ್ವಾಂಸರೊಬ್ಬರು ಆಧಾರಭೂತವಾಗಿ ಹೇಳುತ್ತಾರೆ.[71]

ವಿದೇಶಿ ಪ್ರವಾಸಿಗಳು ವಿಜಯನಗರದಲ್ಲಿ ರೂಢಿಯಲ್ಲಿದ್ದ ಬಾಣಬಿರುಸುಗಳನ್ನು ಕುರಿತು ಕೆಲವು ವಿವರಣೆಗಳನ್ನು ದೊರಕಿಸಿದರೂ, ಕನ್ನಡಕಾವ್ಯಗಳಲ್ಲಿ ರತ್ನಾಕರ ಹೊರತು, ಉಳಿದ ಯಾರೂ ತಮ್ಮ

ಕೃತಿಗಳಲ್ಲಿ ಇದರ ಬಗೆಗೆ ಪ್ರಸ್ತಾಪಿಸಿರುವುದು ಕಂಡುಬಂದಂತಿಲ್ಲ. ಮುಂದೆ ಗೋವಿಂದ ವೈದ್ಯನೊಬ್ಬ ' ಮಹಾನವಮಿಯೊಡ್ಡೋಲಗದುತ್ಸವ ' ಸಂದರ್ಭದಲ್ಲಿ ಬಾಣಬಿರಿಸುಗಳ ಪ್ರದರ್ಶನದ ವಿಚಾರವನ್ನು ಹೇಳುತ್ತಾನೆ.[72]

ನವರಾತ್ರಿಹಬ್ಬದ ಸಂದರ್ಭದಲ್ಲಿ ಏರ್ಪಟ್ಟ ನಾನಾ ವಿಧವಾದ ಪ್ರದರ್ಶನಗಳನ್ನೆಲ್ಲಾ ವಿವರವಾಗಿ ವರ್ಣಿಸಿದ ರತ್ನಾಕರ ಕಡೆಗೆ " ಉರಿಬಾಣ ಚೇಳು ಬಾಣಗಳ ಬಿಡುತ ಪರಿಪರಿಯಲ್ಲಿ ಪುಷ್ಪ ಬಾಣಗಳಾ ಸುರಿವುತಬರುತಿರ್ದರ್ತಿಕಾರರು ತರತರವಿಡಿದಾತೇರ ಬಳಸಿ " (ಭವೈ. ೨೦-೭೧) ಎಂದು ವಿನೋದಕಾರರು ಬಾಣ ಬಿರಿಸುಗಳನ್ನು ಬಿಡುತ್ತಾ ಬರುತ್ತಿದ್ದರೆಂದು ಹೇಳುವನು. ನವರಾತ್ರಿ ಹಬ್ಬವನ್ನು ಕುರಿತು ಕೊಡುವ ಅಬ್ದುರ್‌ರಜಾಕ್ ಹಾಗೂ ಪಾಯೇಸರ ವರ್ಣನೆಯಲ್ಲಿ ರತ್ನಾಕರನ ವರ್ಣನೆಗೆ ಸಾಕ್ಷ್ಯ ದೊರೆಯುತ್ತದೆ :

" ಸಂಜೆಯುವರೆಗೂ ಕುಸ್ತಿ ಮತ್ತು ನೃತ್ಯಗಳು ನಡೆಯುತ್ತವೆ. ಸಂಜೆ ಅನೇಕ ದೀವಟಗೆ ಪಂಜು ಮತ್ತು ದಾಳಿಗಳನ್ನು ಹತ್ತಿಸುತ್ತಾರೆ. ……ಹೀಗೆ ದೀಪಗಳನ್ನು ಹಚ್ಚಿದ ಮೇಲೆ ವಿವಿಧ ರೀತಿಯ ಆಟಪಾಟಗಳೂ, ಮಂತ್ರತಂತ್ರಗಳೂ, ಕುದುರೆ ಗೊಂಬೆಕುಣಿತವೂ, ಮನುಷ್ಯರನ್ನು ಬಲೆಯಲ್ಲಿ ಮೀನು ಹಿಡಿಯುವಂತೆ ಹಿಡಿಯುವ ಆಟವೂ ಕೊನೆಗೆ ಬಾಣಬಿರಿಸುಗಳೂ ನಡೆಯುತ್ತವೆ "(ಪಾಯೇಸ್, ಪ್ರಕರಣ, ೨, ಪು. ೩೭೬) :

ಇದು ಅಬ್ದುರ್ ರಜಾಕನ ವಿವರಣೆ : " …. ಮೂರು ದಿವಸಗಳೂ ಬೆಳಗಿನಿಂದ ಹಿಡಿದು ರಾತ್ರಿಯವರೆಗೂ ಒಂದೇಸಮನೆ ವೈಭವದಿಂದ ಹಬ್ಬವನ್ನು ಆಚರಿಸಲಾಯಿತು. ನಾನಾರೀತಿಯ ಬಾಣಬಿರಿಸಂಗಳೂ, ಬಾಣಬಿರಿಸಂಗಳನ್ನು ಉಪಯೋಗಿಸಿ ಆಡುವ

ಆಟಪಾಟಗಳೂ ಮತ್ತಿತರ ಕ್ರೀಡೆಗಳನ್ನು ವಿವರವಾಗಿ ವರ್ಣಿಸಲು ಇಲ್ಲಿ ಸ್ಥಳವಿಲ್ಲ" (ಪ್ರಕಂ೫೦. ೨. ಪು. ೧೬೬),

**ಇತರ ಕೆಲವು ವಿನೋದಗಳು**

ಹಿಂದಿನ ಕಾಲದಲ್ಲಿ ರಾಜರು ವಿನೋದಕ್ಕಾಗಿ ಇನ್ನೂ ಕೆಲವು ಹವ್ಯಾಸಗಳನ್ನಿಟ್ಟುಕೊಂಡಿದ್ದರು. ರಾಣಿವಾಸದವರು ಆಪ್ತೇಷ್ಟರು ಮೊದಲಾದವರೊಡನೆ ಉದ್ಯಾನವನಗಳಿಗೆ ಹೋಗಿ ಉಯ್ಯಾಲೆ ನೀರಾಟ ಮುಂತಾದುವುಗಳಲ್ಲಿ ತೊಡಗುತ್ತಿದ್ದರು.

ಜಲಕ್ರೀಡೆಗೆಂದೇ ಕಾಸಾರಗಳಿರುತ್ತಿದ್ದವು.[73] ಈ ಕೊಳಗಳನ್ನು ರಾಜರು ಕಲ್ಲುಗಳಿಂದ ಕಟ್ಟಿಸಿ ಅವುಗಳಿಗೆ ಕಾಲುವೆ ಬಿಡುವ ವ್ಯವಸ್ಥೆ ಮಾಡಿರುತ್ತಿದ್ದರು. ನಳಗಳ ಏರ್ಪಾಟೂ ಇರುತ್ತಿತ್ತು.[74] ರಾಜ ವೈಭವದಿಂದ ಮೆರೆಯುತ್ತಿದ್ದ ಈ ಕ್ರೀಡೆಯು ಕೊಳಗಳಲ್ಲಿ ರಾಣಿ ವಾಸದವರು ನೀರಾಟವಾಡಿದ ವರ್ಣನೆಯನ್ನು ಕನಕದಾಸರು ಕೊಡುತ್ತಾರೆ.[75] ಹಾಗೆಯೇ ರಾಮನಾಥನೂ ಅವನ ಸಂಗಡಿಗರೂ ನೀರಾಟವಾಡಿದ ಸಂದರ್ಭವನ್ನು ಚಿತ್ರಿಸುವ ನಂಜುಂಡನ ವರ್ಣನೆ ನೀರಾಟದ ಒಂದು ನೈಜ ಚಿತ್ರವನ್ನು ಮೂಡಿಸುವುದು.[76]

ಈಜುವುದು, ಕುದುರೆಸವಾರಿ ಮಾಡುವುದು ಮುಂತಾದುವು ಹಿಂದಿನ ಕಾಲದಲ್ಲಿ ಬಹಳ ಪ್ರಸಿದ್ಧವಾಗಿತ್ತು. ಲಿನ್‌ಷಾಟನ್ ಎಂಬ ಪ್ರವಾಸಿ[77] ಹೇಳುವ ಜನರು ನೀರಿನಮೇಲೆ ಅನೇಕ ಕಸರತ್ತುಗಳನ್ನು ಮಾಡುತ್ತಿದ್ದರು ಎಂಬ ಹೇಳಿಕೆಗೆ ಪುಷ್ಟಿಯಾಗಿ ಸಾಹಿತ್ಯ ಕೃತಿಗಳಲ್ಲಿ ಎಲ್ಲೂ ಸಾಕ್ಷ್ಯದೊರೆತಂತಿಲ್ಲ (?)

**ಬೇಟೆ**

ಬೇಟೆ ಜನರ ಒಂದು ಮನೋರಂಜನೆಯ ಸಾಧನವಾಗಿ, ಹವ್ಯಾಸವಾಗಿ ಅನಾದಿಕಾಲದಿಂದ ಬೆಳೆದುಬಂದಿದೆ. ಆಹಾರಕ್ಕಾಗಿ

ಮೃಗಗಳನ್ನು ಕೊಲ್ಲುವುದು. ತನ್ನ ಉಳಿವಿಗಾಗಿ ಮೃಗಗಳೊಂದಿಗೆ ಹೋರಾಡುವುದು ಅನಿವಾರ್ಯವೂ ಆಗಿತ್ತು. ರಾಜರಿಗೆ ಬೇಟೆಯಾಡುವುದು ಒಂದು ವಿನೋದ. ಇದಕ್ಕೆ ಮೃಗಯಾವಿನೋದವೆಂದೂ ಹೆಸರು. ಇದು ಅವರಿಗೆ ಕ್ಷತ್ರಿಯ ಧರ್ಮವೂ ಆಗಿತ್ತು.

ದುಷ್ಟ ಶಿಕ್ಷಣ ಶಿಷ್ಟರಕ್ಷಣೆ ರಾಜರ ಗುರಿ. ಕೆಲವು ಸಮಯಗಳಲ್ಲಿ ಕಾಡಿನಲ್ಲಿ ಮೃಗಗಳ ಹಾವಳಿ ತೀವ್ರವಾದಾಗ ಬೇಡರು ರಾಜನ ಬಳಿ ಬಂದು ತಮ್ಮನ್ನು ರಕ್ಷಿಸಬೇಕೆಂದು ಬೇಡಿಕೊಳ್ಳುತ್ತಿದ್ದರು. ಆಗ ರಾಜರು ಬೇಟೆಯನ್ನು ಕೈಗೊಳ್ಳುತ್ತಿದ್ದರು. "ಇಕ್ಕಿ ಹಣೆಗೆ ಕೈಗಳರಾಯಗೆ ಬಿನ್ನವಿಸಿದನಿಂತು; ಲೆಕ್ಕವಿಲ್ಲದೆ ಮೃಗತತಿ ಬಂದು ತಳಿಯೊಳಂಪೊಕ್ಕುದಂ ಚಿತ್ತೈಸೆಂದ" "ಲೀಲೆಯಿಂದುಡುಗೊರೆಗೊಟ್ಟವನಿಗೆ ಭೂಪಾಲ ಪೊಯ್ಸಲು ಭೇರಿಯನು" (ರಾಚ. ೨೭-೩೩, ೩೪)

ರಾಜರು ಬೇಟೆಗೆಂದೇ ಅರಣ್ಯದ ಕೆಲವು ಭಾಗಗಳನ್ನು ಪ್ರತ್ಯೇಕವಾಗಿ ಕಾದಿರಿಸಿ, ಅಲ್ಲಿ ಕಾಡುಪ್ರಾಣಿಗಳನ್ನು ಪುಷ್ಟಿಯಾಗಿ ಬೆಳಸಿ ಯೋಗ್ಯರೀತಿಯಲ್ಲಿ ಸಂರಕ್ಷಿಸಿ ಮೃಗಯಾವಿನೋದವನ್ನೂ ನಡೆಸುತ್ತಿದ್ದರು ಹಾಗೂ ಕೆಲವು ಸಮಯದಲ್ಲಿ ಅವುಗಳನ್ನು ಬೇಟೆಯಾಡುತ್ತಿದ್ದರು.[78] ಕರ್ಣಾಟಕದಲ್ಲಿ ಆಳಿದ ಅನೇಕ ರಾಜರು ಬೇಟೆಯಲ್ಲಿ ಹೆಸರಾಂತವರು ಎಂಬುದಕ್ಕೆ ಅವರಿಗಿದ್ದ ಬಿರುದುಗಳೇ ಸಾಕ್ಷಿ. ೨ನೆಯ ದೇವರಾಯನಿಗೆ ಗಜವೇಂಟೆಗಾಱ ಬಿರುದು ಪ್ರಸಿದ್ಧ ಪ್ರೌಢಪ್ರತಾಪ ದೇವರಾಯ ಮಹಾರಾಯ,[79] ಅಪ್ರತಿಮ ಬಿರುಂದಂಕಗಜವೇಂಟೆಗಾರದೇವೇಂದ್ರ[80] ಎಂಬ ಬಿರುದುಗಳಿದ್ದವು.

ಕ್ರಿ.ಶ. ೧೫೦೪ರಲ್ಲಿದ್ದ ಉಮ್ಮತ್ತೂರಿನ ಮಹಾಮಂಡಲೇಶ್ವರ ಸಂಜರಾಜ ಒಡೆಯರು 'ಗಜವೇಂಟೆಗಾರ' ಎಂಬ ಬಿರುದು ಪಡೆದಿದ್ದರು. ಆನೆ ಮತ್ತು ಜಿಂಕೆಗಳ ಕ್ರೀಡೋತ್ಸವವನ್ನು

ಏರ್ಪಡಿಸುತ್ತಿದ್ದ ಇಮ್ಮಡಿ ಒಡೆಯರಿಗೆ (೧೫೦೫) 'ಗಜಮಾರ್ಗ ವಿಹಾರ' ಎಂಬ ಬಿರುದಿತ್ತು.[81]

ಅಷ್ಟಾದಶ ವರ್ಣನೆಗಳಲ್ಲಿ ಬೇಟೆಯೂ ಒಂದಾಗಿರುವುದರಿಂದ ಕಾವ್ಯಗಳಲ್ಲಿ ಬರುವ ಬೇಟೆಯ ವರ್ಣನೆಯಲ್ಲಿ ಬೇಟೆಗೆ ಸಂಬಂಧಿಸಿದಂತೆ ಅನೇಕ ಉಪಯುಕ್ತ ವಿಷಯಗಳು ದೊರೆಯುತ್ತವೆ. ಐತಿಹಾಸಿಕ ವರದಿಗಳು, ಪ್ರವಾಸಿಗಳ ವರದಿಗಳು, ಶಾಸನಗಳು ಮುಂತಾದ ಚಾರಿತ್ರಿಕ ಮೂಲಗಳು ಬೇಟೆಯ ವಿಷಯದಲ್ಲಿ ದೊರಕಿಸುವ ವಿಷಯಗಳಿಗಿಂತ ಹೆಚ್ಚಿನ ಹಾಗೂ ವೈವಿಧ್ಯಪೂರ್ಣ ವಿವರಗಳನ್ನು ಕವಿಗಳು ಕೊಡುವ ಬೇಟೆಯ ವರ್ಣನೆಯಲ್ಲಿ ಕಾಣಬಹುದು.

ಚಾರಿತ್ರಿಕ ವಿವರಗಳು ಬೇಟೆಯಾಡಿದವರ ಹೆಸರು, ಕಾಲ, ಸ್ಥಳ, ನೀಡಿದ ಉಂಬಳಿ–ಇವೇ ಮುಂತಾದ ವಿಷಯಗಳಿಂದ ಕೂಡಿ ಚಿತ್ರ ಜಾಳಾಗಿರುತ್ತದೆ. ಆದರೆ ಬೇಟೆ ಎಂದರೆ ಕೇವಲ ನಾಮ ನಿರ್ದೇಶನ, ಅಂಕೆ ಸಂಖ್ಯೆಗಳ ವರದಿಯಷ್ಟು ಮಾತ್ರವೇ ಅಲ್ಲ! ಬೇಟೆಯ ಪರಿಕರಗಳು, ಬೇಟೆಯಲ್ಲಿ ಉಪಯೋಗಿಸುತ್ತಿದ್ದ ನಾನಾ ರೀತಿಯ ಬಲೆಗಳು, ಬೇಟೆಯಾಡಿದ ವಿವಿಧ ಪ್ರಾಣಿಗಳು, ಅವುಗಳನ್ನು ಹಿಡಿಯುವುದರಲ್ಲಿ ತೋರಿದ ಜಾಣ್ಮೆ, ಬೇಟೆಯಲ್ಲಿ ದೊರೆತ ನಾನಾ ವಿಧವಾದ ಅಪರೂಪದ ವಸ್ತುಗಳು, ಬೇಡ ಬೇಡತಿಯರ ಉಡುಗೆ ತೊಡಿಗೆ, ಆಚಾರ ವ್ಯವಹಾರ–ಇವೇ ಮುಂತಾದ ಹತ್ತಾರು ಜೀವಂತ ಚಿತ್ರಗಳು ಕವಿಗಳ ವರ್ಣನೆಯಲ್ಲಿ ರಸಪೂರ್ಣವಾಗಿ ಮೂಡಿ ಬಂದಿರುತ್ತವೆ. ಈ ವರ್ಣನೆಗಳೆಲ್ಲವನ್ನೂ ಕವಿಯ ಕಲ್ಪನೆ, ಉತ್ಪ್ರೇಕ್ಷೆ ಎಂದು ಎಲ್ಲ ಸಂದರ್ಭಗಳಲ್ಲೂ ತಳ್ಳಿಹಾಕಲು ಬರುವಂತಿಲ್ಲ. ಎಷ್ಟೋ ಸಂದರ್ಭಗಳಲ್ಲಿ ಬೇಟೆಗೆ ಸಂಬಂಧಿಸಿದಂತೆ ಕವಿಗಳು ಕೊಡುವ ವರ್ಣನೆಗಳು ವಿಚಾರ

ಪೂರ್ಣವಾಗಿದ್ದು, ಇತಿಹಾಸಕಾರರ ಗಮನವನ್ನು ಕೂಡ ಸೆಳೆಯುವಂತಿವೆ.

**ಬಲೆಗಳು**

ಬೇಟೆಯ ಪರಿಕರಗಳಲ್ಲಿ ಒಂದಾದ ಹಾಗೂ ಬಹಳ ಮುಖ್ಯವಾದ ಬಲೆ ಕಾಡಿನಲ್ಲಿ ಮೃಗಪಕ್ಷಿಗಳನ್ನು ಹಿಡಿಯಲು ಬಹಳ ಅವಶ್ಯ ; 'ಸಿಲುಕುವುದು ಮೃಗಪಕ್ಷಿ ಹೂಡಿದ ಬಲೆಗಳಲಿ ಕಾಡಾನೆ ಬೀಸಿದ ಬಲೆಯ ಕೊಂಬುದೆ,' (ಗಭಾಕ, ೧೩-೧೪). ಒಂದೊಂದು ಪ್ರಾಣಿಯನ್ನು ಹಿಡಿಯಲು ಒಂದೊಂದು ರೀತಿಯ ಬಲೆಗಳಿದ್ದಂತೆ ತೋರುತ್ತದೆ. 'ಮೊಲಕೊಡ್ಡಿದ ಬಲೆಯೊಳ್. ಮೃಗರಾಜಂ ತೊಡರ್ಗುಮೆ '—ಎಂದು ಪೊನ್ನ ಒಂದು ಸಂದರ್ಭದಲ್ಲಿ ಪ್ರಾಸಂಗಿಕವಾಗಿ ಹೇಳಿದ್ದಾನೆ. (ಶಾಂತಿಪುರಾಣ ೩-೯೩). ಆನೆಯ ಬಲೆ, ಎರಳೆವಲೆ, ಕಪಿಬಲೆ, ಹಂದಿ ಬಲೆ, ಹುಲಿ ಬಲೆ, ನರಿಬಲೆ—ಎಂದು ಕವಿಗಳು ಕೆಲವು ಪ್ರಾಣಿಗಳ ನಾಮ ನಿರ್ದೇಶನದಿಂದಲೇ ಕೂಡಿದ ಬಲೆಗಳ ಹೆಸರನ್ನು ಹೇಳಿದ್ದಾರೆ.

ಕವಿಗಳು ಕೊಡುವ ಬೇಟೆಯ ವರ್ಣನೆಯಲ್ಲಿ ಬಲೆಗಳದೇ ಸಿಂಹ ಪಾಲು. ಬೇಟೆಗೆ ಸಂಬಂಧಿಸಿದಂತೆ ಪರಿಶೀಲಿಸಿದ ಕೃತಿಗಳಲ್ಲಿ ನನ್ನ ಕುತೂಹಲವನ್ನು ಕೆರಳಿಸಿದ್ದು ಈ ಬಲೆಗಳ ಪಟ್ಟಿ. ಸುಮಾರು ೮೨ ಬಲೆಗಳ ಹೆಸರನ್ನು, ಅವುಗಳು ದೊರೆಯುವ ಕಾವ್ಯಸಂದರ್ಭವನ್ನು ಸೂಚಿಸಿ ಮುಂದೆ ಒಂದು ಪ್ರತ್ಯೇಕವಾದ ಪಟ್ಟಿಯನ್ನೇ ಕೊಟ್ಟಿದ್ದೇನೆ. ಈ ಬಲೆಗಳ ಜೊತೆಗೆ ಇನ್ನೂ ಎಷ್ಟೋ ಬಲೆಗಳ ಹೆಸರುಗಳು ಇತರ ಕನ್ನಡ ಸಾಹಿತ್ಯ ಕೃತಿಗಳನ್ನು ಪರಿಶೀಲಿಸಿದಾಗ ದೊರೆತು ಅವುಗಳ ಸಂಖ್ಯೆ ಶತಕವನ್ನು ಮೀರಿ ಸಂಶೋಧಕರ ಕುತೂಹಲವನ್ನು ಕೆರಳಿಸಿದರೆ ಆಶ್ಚರ್ಯವೇನಿಲ್ಲ. ಬೇಟೆಯ ವರ್ಣನೆ

ಯಲ್ಲಿ ದೊರೆಯುವ ಈ ಪ್ರತಿಯೊಂದು ಬಲೆಯ ರಚನಾ ವಿನ್ಯಾಸ, ವೈವಿಧ್ಯ, ಪ್ರಯೋಗ ಇತ್ಯಾದಿಗಳನ್ನು ಅವುಗಳಿಗಿರುವ ಅನ್ವರ್ಥನಾಮದಿಂದ ಹಾಗೂ, ಕವಿ ಕೊಡುವ ವರ್ಣನೆಯ ಹಿನ್ನೆಲೆಯ ಅಧ್ಯಯನದ ಬೆಂಬಲದಿಂದ ಕಂಡುಕೊಳ್ಳಬಹುದು. ಕವಿಗಳು ಕೊಡುವ ಸಮರ ವರ್ಣನೆಯಲ್ಲಿ ಬರುವ ವಿವಿಧ ಸಮರೋಪಕರಣಗಳ ಕಾರ್ಯವ್ಯಾಪ್ತಿ ಹೇಗೆ ಸಂಶೋಧಕರಿಗೆ ಅಧ್ಯಯನಕ್ಕೆ ಒಂದು ಮುಖ್ಯ ವಸ್ತುವಾಗಿ ನಿಂತಿದೆಯೋ ಹಾಗೆಯೇ, ಬೇಟೆಯ ವರ್ಣನೆಯಲ್ಲಿ ಬರುವ ವಿವಿಧ ಬಲೆಗಳು ಹಾಗೂ ಬೇಟೆಯ ಉಪಕರಣಗಳನ್ನು ಕುರಿತು ಸ್ವತಂತ್ರವಾಗಿ ವಿಚಾರಮಾಡಿ ಅಧ್ಯಯನ ನಡೆಸಲು ಉತ್ಸಾಹಿ ಸಂಶೋಧಕರಿಗೆ ಅವಕಾಶವಿದೆ.

ಉದಾಹರಣೆಗೆ ತಮ್ಮಲ್ಲೇ ಅರ್ಥ ಸ್ಪಷ್ಟತೆಯಿಂದ ಕೂಡಿರುವ ಈ ಕೆಲವು ಬಲೆಗಳ ಹೆಸರನ್ನು ನೋಡಿ: ಮಯಣದಂಟಿನ ಮಂಡವಿಗೆ ಬಲೆ, ಸೊರ್ಕುಮುರ್ದು ಪೆರ್ಬಲೆ, ಹೊಸದಿಕ್ಕಣ್ಣಿವಲೆ, ಮುಕ್ಕಣ್ಣ ಬಲೆ, ಹೊಸೆದ ಕಾಲ್ಗಣ್ಣಿವಲೆ, ಪುರಿಯೊಕ್ಕಣ್ಣಿವಲೆ, ಕರಿಯ ಜವಿವಲೆ, ಇತ್ಯಾದಿ. ಬಲೆಗಳ ಹೆಸರುಗಳನ್ನು ವಿಪುಲವಾಗಿ ನೀಡಿರುವ ಕೃತಿಗಳಲ್ಲಿ ಮುಖ್ಯವಾಗಿ ಗದುಗಿನ ಭಾರತ, ಹರಿಶ್ಚಂದ್ರ ಕಾವ್ಯ, ಸಾಳ್ವ ಭಾರತ, ಶಬರಶಂಕರ ವಿಳಾಸ, ಪುಣ್ಯಾಸ್ರವ-ಮುಂತಾದ ಕೃತಿಗಳನ್ನು ಸ್ಮರಿಸಬಹುದು.

### ಬೇಟೆಯ ಪರಿಕರಗಳು

ಬೇಟೆಗೆ ಸನ್ನದ್ಧರಾಗಿ ಹೊರಟವರನು ವರ್ಣಿಸುವ ಚಿತ್ರಗಳು ಬೇಟೆಗೆ ಬೇಕಾದ ಇತರ ವಸ್ತುಗಳ ಅಗತ್ಯವನ್ನು ಎತ್ತಿ ತೋರಿಸು ತ್ತದೆ. ನಾರಣಪ್ಪ ಕೊಡುವ ಈ ಚಿತ್ರವನ್ನು ನೋಡಿ:

"ಜಾಳಿಸಿದ ಹದವಿಲ್ಲುಗಳ ಬಡಿಕೋಲುಗಳ ಸಂಕಲೆಯು ನಾಯ್ಗಳ[82] ಕೋಲುಂವಲೆಗಳ ಸಿಡಿವಲೆಯು ಮಿಡಿವಲೆಯು ಕಾಲುಗಣ್ಣಿಯು ಹೆಬ್ಬಲೆಯು ಬೆಳ್ಳಾಲವಲೆಗಳ ಮುಯುಣದಂಟಿನ[83] ಮೇಲುಕೊಂಬಿನ ಬೇಟೆಗಾರರು ಬಳಸಿದರು "(ಗಭಾಅ. ೫–೩೩).

ನಾರಣಪ್ಪ ಮುಂದೆ ಅರಣ್ಯಪರ್ವದಲ್ಲೇ ಕೊಡುವ (೧೩-೨೩) ಇನ್ನೊಂದು ವರ್ಣನೆ ಹೆಚ್ಚು ವಿಸ್ತಾರವಾಗಿದೆ :

"ಬಂಡಿಗಳ ಬೆಳ್ಳಾರವಲೆಗಳ ಖಂಡವಲೆಗಳ ತಡಿಕೆವಲೆಗಳ ಗುಂಡುವಲೆಗಳ, ಬೀಸುವಲೆಗಳ, ಕಾಲುಗಣ್ಣಿಗಳ. ದಂಡಿವಲೆಗಳ, ತೊಡಕುವಲೆಗಳ ಹಿಂಡುವಲೆಗಳ ಮುಯುಣದಂಟಿನ ಮುಂಡರಿಗೆ ಬಲೆಗಳಕಿರಾತರು ಕೆದರಿತಗಲದಲಿ "

ದೇಪರಾಜನ ಸೊಬಗಿನ ಸೋನೆಯಲ್ಲಿ (೧೭–೩೬) ದೊರೆಯುವ ಈ ವರ್ಣನೆ ಬೇಟೆಯ ಪರಿಕರಗಳ ಬಗೆಗೆ ಸ್ವಲ್ಪ ಹೆಚ್ಚು ವಿವರಗಳನ್ನು ನೀಡುತ್ತದೆ: ಬಜಸಿಡಿಲ್ವಲೆ ಕಣ್ಣೆಗುನ್ನಿಲು, ಸಿಲುಕು, ಗುಣಿ. ಗುಣಿಲಗುದ್ದ, ಗಣ್ಣಿಗಣ್ಣೆಗುಂಡು, ತಡಿಕೆ, ಮಂಕ್ಕರಿ, ಪಟಗಳ ತಳೆದವನೊಳು ನಡೆತಂದರು ಲುಬ್ಧಕರಾಗ[84]. "

ಕಂಪಿಲನು ಬೇಟೆಗೆ ಹೊರಟ ಸಂದರ್ಭದಲ್ಲಿ ಜೊತೆಯಲ್ಲಿ ಕೊಂಡೊಯ್ದ ಪರಿಕರಗಳು, ರಾಜೋಚಿತವಾಗಿಯೇ ಇದ್ದವು. 'ಗುಡಿಗೂಡಾರ ಸರಾತಿಪೆಟ್ಟಿಗೆ ಗಿಂಡಿ ಪಡಿಗ ಮೇಲ್ವಾಸು ಮಂಚಗಳ ಗಡಣವೆಯ್ದಿತು ರಾಯನ ನಿಯಮದೊಳಂದು ತಡೆವೇಂಟೆಯ ಸಮಕಟ್ಟು" (ರಾಚ, ೨೭–೪೬)

ಬೇಡರಂತೆ ಬೇಡಿತಿಯರೂ ತಮಗೆ ತಕ್ಕಂತೆ ತೊಡೆ ಚಲ್ಲಣ ವೊಲೆಕಟ್ಟು, ಹೆಣೆದ ಜಡೆ ಕಲ್ಲಿಸುರಗಿಗಳಿಂದ ಕೂಡಿಬಂದರು.[85] ಬೇಡಪಡೆ ಕುಡುಗೋಲು, ಕತ್ತಿ, ಕೊಡಲಿ, ಮುಚ್ಚು, ಪೇರಿಟ್ಟೆ, ಬಡಿಕೋಲು, ಇಡುಕೈದುಗಳನ್ನು ಹಿಡಿದುಬಂತು.[86]

ದೀವ

ಬೇಟೆಯ ಪರಿಕರಗಳನ್ನು ಕುರಿತು ಹೇಳುವ ಈ ಸಂದರ್ಭದಲ್ಲಿ ಮುಖ್ಯವಾಗಿ ಹೇಳಬೇಕಾದುದು ದೀವ. ಬೇಟೆಯಲ್ಲಿ ಕ್ರೂರ ಮೃಗಗಳನ್ನು ಆಕರ್ಷಿಸುವುದಕ್ಕಾಗಿ ಉಪಯೋಗಿಸುವ ಪಳಗಿಸಿದ ಪ್ರಾಣಿಗೆ ದೀವ ಎಂದು ಹೆಸರು.[87] ಕವಿಗಳ ಬೇಟೆಯ ವರ್ಣನೆಯ ಚಿತ್ರಗಳಲ್ಲಿ ಈ ಪದ ಹಾಸುಹೊಕ್ಕಾಗಿ ಬೆರೆತು ಹೋಗಿದೆ.[88] ಈ ಪದದ ಅರ್ಥವ್ಯಾಪ್ತಿಯ ಸುತ್ತ ದೀವದ ಬೇಂಟೆ[89], ದೀವದ ಮೃಗ[90], ದೀವದ ಹುಲ್ಲೆ[91], ದೀವದ ಹುಲಿ[92]—ಎಂಬ ಪದಗಳು ಹುಟ್ಟಿಕೊಂಡು ಅವು ೯ಟೆಗೆ ಸಂಬಂಧಿಸಿದಂತೆ ವಿಶೇಷಾರ್ಥವನ್ನು ಸೂಚಿಸುತ್ತವೆ. ದೀವಕ್ಕೆ ಉಪಯೋಗಿಸುತ್ತಿದ್ದ ನಾನಾ ವಿಧವಾದ ಪಕ್ಷಿಮೃಗಗಳನ್ನು ಕುರಿತಂತೆ ಒಂದೆರಡು ಚಿತ್ರಗಳನ್ನು ನೋಡಿ:

"ತನ್ನಾಳ್ದನ ಬೇಂಟೆಯೊಳ್ ಮೆಚ್ಚಿಸಿ ಬಸಂಗೆಯ್ದಪೆನೆಂದು ದಡಿವಲೆಗಳಂ ಬಡಿಕೋಲ್ಗಳಂ ಅಂಟುಗಳೆಗಳಂ ಕ್ವಾಲ್ಗಣ್ಣಿಗಳಂ ಗಿಡುಗ ಸಾಳುವ ಜಾಯಿಲಂಗಳಂ ದೀಹದಮಿಗವಕ್ಕಿಗಳಂ ತರಿಸಿ" (ಚಿಕವಂ. ೫–೧೬);

"ಲಂಘಿಸಿನೆಲನನೊದೆದು ಪುಟನೆಗೆದು ಗರ್ಜಿಸುವ ಬರೆ ಹೆದರಿ ಕಂಗೆಟ್ಟು ಡೆಂಢಣಿಸಿ ಸರಳಿಸುವ ಹರಿಣಂಗಳಂ ಮೋದಿ ಮುಂಚಿ ದಟ್ಟಿ ಕೆಡಹಿದವು ದೀಹದ ಹುಲಿಗಳು" (ಹಚಕಾ. ೫–೩೧).

ಬಗೆ ಬಗೆಯ ಬೇಟೆಗಳು

ಎಷ್ಟು ತರಹದ ಬೇಟೆಗಳಿದ್ದವು ಎಂಬುದಕ್ಕೆ ಕನ್ನಡಕಾವ್ಯಗಳಲ್ಲಿ ಮಿಶ್ರ ಪ್ರತಿಕ್ರಿಯೆ ಕಂಡುಬರುತ್ತದೆ; "ಗೋರಿವೇಂಟೆ ... ಘನ ಸೋಹುವೇಂಟೆಗಳೆನಿಪ್ಪ ಹೆಸರಂಹೊತ್ತು ವೆಂಚಿವುತಿಪ್ಪತ್ತೆಂಟು ತೆಱದುಚಿತವೇಂಟೆಯನಾಡಿದಾ..." ಎಂದು ಹರಿಶ್ಚಂದ್ರಕಾವ್ಯ

(೫–೪೯) ಹೇಳಿದರೆ ; "ನೆಗಳ್ತೆಯ ತೋಹುವೇಂಟೆ ಸಂಗಳಿಸಿದ ನೀರವೇಂಟೆ ಘನಸೋಹಿನವೇಂಟೆಯೆನಿಪ್ಪ ನಾಮಮಂ ತಳೆದೆಸೆವೆಂಟು ಬೇಂಟೆಗಳನಾಡಿದು" ಎಂದು ಸುರಂಗನ ತ್ರಿಷಷ್ಟಿ ಪುರಾತನ ವಿಳಾಸ (೨೭–೯೨) ಹೇಳುತ್ತದೆ.

ಗೋರಿವೇಂಟೆಗೆ ಕನ್ನಡ ಕನ್ನಡ ನಿಘಂಟು, ಎಂಟು ತರಹದ ಬೇಟೆಗಳಲ್ಲಿ ಒಂದು ಎಂದು ಹೇಳಿ ಗೋರಿವೇಂಟೆ[93], ಪಳಹರವೇಂಟೆ[94], ಪಟವೇಂಟೆ, ವಿದ್ಯಾಧರಬೇಂಟೆ, ಚಿತ್ರವೇಂಟೆ[95], ಅಂಟುವೇಂಟೆ[96], ತೋಹಿನಬೇಂಟೆ[97], ಘನಸೋಹುವೇಂಟೆ[98] — ಎಂದು ಎಂಟು ವಿಧವಾದ ಬೇಟೆಯ ಹೆಸರನ್ನು ಹೇಳುವುದು, (ಕಕನಿ ೩–೨೬೪೮)

ಬೇಟೆಯಾಡಿದ ನಾನಾ ವಿಧವಾದ ಮೃಗಪಕ್ಷಿಗಳ ಹೆಸರು ಅನೇಕ ಕಾವ್ಯಗಳಲ್ಲಿ ಕಂಡುಬರುತ್ತದೆ. ಅವುಗಳಲ್ಲಿ ಒಂದೆರಡನ್ನು ಇಲ್ಲಿ ಗಮನಿಸಬಹುದು : ಇದು ನಾರಣಪ್ಪನ ವರ್ಣನೆ.

"ಗಾಯುಮಡೆದೆಕ್ಕಲನ ರಭಸದ ಜಾಯಿಲಂಗಳ ಗರ್ಜನೆಯ ಪೂರಾಯುದೇರಿನ ಕರಡಿ ಕಾಡಾನೆಗಳ ಕಳವಳದ ನೋಯಲೊರಲುಮಶರಭ ಸಿಂಹ ಲುಲಾಯ ವೃಕಶಾರ್ದೂಲ ಶಶಗೋಮಾಯು ಮೊದಲಾದಖಿಳಮೃಗರವ ತುಂಬಿತಂಬರವ" (ಗಭಾಅ,೧೩-೨೮, ನೋಡಿ, ಅದೇ ೧೩–೧೮) ;

ಮುಂದಿನದು 'ಮಹಾದೇವಿಯಕ್ಕ ಪುರಾಣ'ದಲ್ಲಿ (೩೧–೨೯) ಬರುವ ವರ್ಣನೆ. ಮಹಾದೇವಿ ಕಲ್ಯಾಣಕ್ಕೆ ಬರುವಾಗ ಈ ಮೃಗಗಳ ಬೇಟೆಯುನ್ನು ನೋಡಿದಳು :

"ಸೊಕ್ಕಾನೆವೇಂಟೆ[99] ರಲವೇಂಟೆ[100] ಮರೆವೇಂಟೆ ಮಲೆತೆಕ್ಕಲನ[101] ಬೇಂಟೆ ಹೆಬ್ಬುಲಿವೇಂಟೆ[102] ಕತ್ತುರಿಯ ಬೆಕ್ಕುಗಳ ಬೇಂಟೆ ಝಲ್ಲರಿಯ ಮಿಗವೇಂಟೆ ಗಂಡಿನ ಸಿಂಗವೇಂಟೆ ಪಲವು ಪಕ್ಕಿಗಳ ಬೇಂಟೆ[103]ಯುಂಡುವೇಂಟೆ ಮೊಲವೇಂಟೆ ಜಲದಿಕ್ಕೆ

ಯೊಳ್ಜಲಜಂತುಗಳ ಬೇಂಟೆ[104]ಯಾಡುಂವರ್ಪಿಕ್ಕಳಿಯಂ ಪೂವಿನಳ್ತಿಗರಂ ಗುಂಜಾಭರಣದಂಜನ ನಿಭಾಂಗರಲ್ಲಲ್ಲಿ"

ಬೇಟೆಯಲ್ಲಿ ಒಂಟೆಯ ಹೆಸರು ಕೇಳಿಬರುವುದು ಅಪರೂಪ. ದೇಪರಾಜನು ಸೊಬಗಿನ ಸೋನೆಯಲ್ಲಿ (೧೧–೫೧) ಆನೆ, ಕರಡಿ, ಸಿಂಹ, ಕಾಡುಕೋಣ, ಜಲ್ಲಿಮಿಗ, ಎಂಟಡಿ (ಚೇಳು) ಹಂದಿ, ಪುಲ್ಲೆಸಾರಂಗ, ವೊಂಟೆ–ಕಿರುಮಿಂಗವುರುಳ್ದುವು ಎಂದು ಹೇಳುವನು.

ಕುಮಾರವ್ಯಾಸ ಕೊಡುವ ಬೇಟೆಯ ವರ್ಣನೆಯು ಒಂದು ಚಿತ್ರದಲ್ಲಿ ಕಾಡಿನಲ್ಲಿ ಬೇಡರು ಯಾವ ಯಾವ ಮೃಗಗಳನ್ನು ಯಾವ ಯಾವ ಆಯುಧದಿಂದ ಹೇಗೆ ಕೊಂದರು ಎಂಬುದರ ನುಡಿಚಿತ್ರ ದೊರೆಯುತ್ತದೆ ;

"ಹೊಕ್ಕುತಿವಿದರು ಸಬಳದಲಿ ಜಡಿವೆಕ್ಕಲನನಳವಿಯಲಿ ಹರಿಣವನಿಕ್ಕಿದರುನಾರಾಚದಲಿ. ಸೈವರಿದು ಸೈರಿಭನ ಸೊಕ್ಕಿದರು ಸುರಗಿಯಲಿ. ಹೊದರಲಿ ಹೊಕ್ಕ ಹುಲಿಗಳ ಕೆಣಕಿ ಖಡ್ಗದಲಿಕ್ಕಡಿಯ ತೋರಿದರು ತೂರಿದರಖಿಳಮೃಗಕುಳವ" (ಗಭಾಅ, ೧೩–೨೬).

ಬೇಟೆ, ಕೇವಲ ವಿನೋದ ಮಾತ್ರವೇ ಅಲ್ಲ, ಅದು ಲಾಭದಾಯಕ ಉದ್ಯಮವೂ ಹೌದು. ಕೆಲವು ಪ್ರಾಣಿಗಳ ಚರ್ಮ, ಹಲ್ಲು, ಕೊಂಬು, ಉಗುರು—ಮುಂತಾದುವುಗಳಿಗೆ ಅಪಾರವಾದ ಬೆಲೆ ಇದೆ. ವ್ಯಾಪಾರಿ ದೃಷ್ಟಿಯಿಂದಲೂ ಈ ಮೃಗಗಳನ್ನು ಬೇಟೆಯಾಡುವುದುಂಟು. ಕನಕದಾಸರು ಕೊಡುವ ಬೇಟೆಯ ವರ್ಣನೆಯಲ್ಲಿ ಬೇಡರು ಕರಿಯರಿಷಲ್ಲರಿ, ಬೆಳಜವ್ವಾದಿ, ಕಸ್ತೂರಿ ಪುಣುಗಿನ ಚೆಟ್ಟು, ಗೋರೋಜನ, ಕೃಷ್ಣಾಜ, ಹುಲಿಚರ್ಮ, ನರಿಯಕೊಂಬು —ಮುಂತಾದುವುಗಳನ್ನು ಸಂಗ್ರಹಿಸಿದ ವಿಚಾರ ಹೇಳಿದೆ.[105]

ಬೇಟೆಗೊಳಗಾದ ಪಕ್ಷಿಗಳನ್ನು ಕುರಿತು ಹರಿಶ್ಚಂದ್ರ ಸಾಂಗತ್ಯವು (೧–೭೨) ಕಾಗೆ, ನವಿಲು, ಕಬ್ಬಾಯು, ಗುಬ್ಬಿ, ಕೊಂಚೆ, ಗೂಗೆ, ಮುರವ, ಪಾರಿವ, ಜಾಗರಿಗ, ಹರಡೆ, ಹಂಗ, ಗೊರವಕ್ಕ ಮೂಗಿಲ ಗಣ್ಣಿನ ಹಸುಬ—ಎಂಬ ಹೆಸರುಗಳನ್ನು ಹೇಳಿದರೆ, ರಾಮನಾಥ ಚರಿತವು (೨೭–೮೫) ಕಕ್ಕುಳಿ, ಕನ್ನವಿಲು, ಕಾಡೆ, ಗಿಡುಗ, ಗಿಳಿ, ಗೌಜು, ಸರಲೆ, ಹಂಗ, ಹಸುಬ, ಸಾಳ್ವ, ನಾಗಗಳನಿರದೆ ಕೆಡಪಿದುದು—ಎಂದು ಹೇಳುತ್ತದೆ.

ಕೆಲವು ಸಂದರ್ಭಗಳಲ್ಲಿ ಬೇಟೆಯಲ್ಲಿ ಅನಾಥವಾಗಿ ಅಳಿದುಳಿದ ಕೆಲವು ಮುದ್ದಾದ ಮರಿಗಳನ್ನು ತಂದು ಅವುಗಳನ್ನು ಪೋಷಿಸಿ ವಿನೋದಪಟ್ಟುದೂ ಉಂಟು :

"ಮಿಱುಗುವ ಮೆಲ್ಲಡಿ ನಡೆಗಳ್ಗೆ ಹಂಸೆಯ ಮರಿಗಳಕೊಟ್ಟರಂತ್ಸವದಿ. ಪಾಡುವಿಂಚರಕೆ ಕೋಗಿಲೇ, ತೊದಲ್ನುಡಿಯ ಮಾತಾಡುವುದಕೆ ರಾಜಕೀರ, ನೋಡುವುದಕೆ ಹುಲ್ಲೆಯ ಹೆಣ್ಣುಮರಿಗಳ ಜೋಡಿಸಿಕೊಟ್ಟರಂತ್ಸವದಿ" (ಮೋತ, ೧೯–೭೬, ೭೭).

# ಅಡಿಟಿಪ್ಪಣಿಗಳು

1 ಭಾ.ಸಂ.ಪು. 243–5

2 ಈ ಆಟಗಳನ್ನು ವ್ಯಕ್ತಿ ತನಗೆ ಮನಸ್ಸುಬಂದಾಗ ತಾನೊಬ್ಬನೇ ಬೇಕಾದರು ಆಡಿಕೊಳ್ಳಬಹುದು ಅಥವಾ ನಾಲ್ಕು ಜನರ ಜೊತೆಸೇರಿ ಬೇಕಾದರೂ ಆಡಬಹುದು.

3 ಚೆಂಡಾಟ, ಕುಸ್ತಿ, ಬಿಲ್ಲುಗಾರಿಕೆ, ಕುಣಿಯುವುದು, ಚಿಣ್ಣಿ ಕೋಲು, ಮರಕೋತಿ–ಮುಂತಾದುವು ವಿದ್ಯಾರ್ಥಿಗಳ ವ್ಯಾಯಾಮ ವಿನೋದಗಳಾಗಿದ್ದವೆಂದು ಇತ್ಸಿಂಗನು ಹೇಳುವನು. (ಭಾ.ಸಂ.ಪು. 241)

4 ಪುಕೀ. 2–202 (1, 2, 4)

5 ಜೈಭಾ. 21–12, 28–4; 'ಹೆಣ್ಣು ಕಂಡರಿಯದರಣ್ಯವಾಸಿಗಳ ತಂದಣ್ಣೆಕಲ್ಲಾಡಿ ತೋರಿಸುವೆನು' ರಾ.ಚ. 24–51; ನೋಡಿ, ಅನಂರಾ. 5–4–40

ಅಣ್ಣೆಕಲ್ಲಾಟ–ತಿರಿಕಲ್ಲಾಟ ಎರಡೂ ಒಂದೇ ಅರ್ಥವನ್ನು ಕೊಡುವ ಆಟ. 'ತಿಱಿಕಲ್ಲೆನೆಂತುಂ ಕವಿಗಳ್ ನೆಱೆಪೇಟಿಲ್ಲಣ್ಣೆಕಲ್ಲಕ್ಕುಂ' (ಕಕನಿ. I. ಪು. 178); ಆಟವಾಡುವಾಗ ಮೇಲಕ್ಕೆ ಹಾರಿಸಿ ಕೈಯೊಡ್ಡಿ ಹಿಡಿದುಕೊಳ್ಳುವ ಸಣ್ಣಕಲ್ಲಿಗೆ ಅಣ್ಣೆಕಲ್ಲೆಂದು ಹೆಸರು. ಇದೂ ಒಂದು ರೀತಿಯಲ್ಲಿ ಗಜ್ಜುಗದಾಟದ ರೀತಿಯೇ ಇರಬೇಕು. ಗಜ್ಜುಗ ದೊರೆಯದೇ ಇದ್ದಾಗ ಸಣ್ಣ ಸಣ್ಣ ಕಲ್ಲುಗಳನ್ನೇ ಆಟಕ್ಕೆ ಉಪಯೋಗಿಸುವುದು ವಾಡಿಕೆ. [ಉದಾಹರಣೆಗೆ ಇಂದಿನ 'ಪೊಟಿಟೊರೇಸ್' ಎಂಬ ಹೆಸರಿನ ಆಟದಲ್ಲಿ ಆಲೂಗೆಡ್ಡೆಯನ್ನು ಉಪಯೋಗಿಸುವುದು ವಾಡಿಕೆ. ಅದನ್ನು ಉಪಯೋಗಿಸಿ ಆಡುತ್ತಿದ್ದುದರಿಂದಲೇ ಅದಕ್ಕೆ ಆ ಹೆಸರು ಬಂದಿರಬೇಕು. ಪೊಟಿಟೊ ದೊರೆಯದಿದ್ದಾಗ, ಅದರ ಬದಲಿಗೆ ಇನ್ನಾವುದಾದರೂ ಸಣ್ಣಗೆ ಗುಂಡಗಿರುವ ಪದಾರ್ಥವನ್ನೂ, ಕೆಲವು ಸಮಯದಲ್ಲಿ ಕಲ್ಲನ್ನೂ ಉಪಯೋಗಿಸಿರುವುದನ್ನು ನಾನು ಕಂಡಿದ್ದೇನೆ. ಪದಾರ್ಥ ಏನೇ ಉಪಯೋಗಿಸಿರಲಿ ಆಟದ ಹೆಸರು, ನಿಯಮ, ಒಳ

ಅರ್ಥ ಬದಲಾಗಿಲ್ಲ. ಹಾಗೆಯೇ ಅಣ್ಣೆಕಲ್ಲಾಟ–ತಿರಿಕಲ್ಲಾಟ–ಗಜ್ಜುಗ ದಾಟಗಳು 'ದೇವನೊಬ್ಬ ನಾಮ ಹಲವು' ಎಂಬ ಅರ್ಥದಲ್ಲಿ ಬಳಕೆ ಯಲ್ಲಿ ಬಂದಿದೆಯೆಂದು ತೋರುತ್ತದೆ.

'ತಿಱಿಕಲ್ಲಾಡುವ ಬೊಟ್ಟುವೋರಿಸುವ ಸೆಂಡಂಪೊಯ್ವ ನಾನಾ ಕ್ರೀಡೆಯಿಂ' (ಸುಕುಮಾ 2-6)

6 ಚೆ.ಬ.ಪು. 5–39. 'ಬಾಯ್ಗಳಂ ಪೊಯ್ವಂತೆ ತೋಳಾಟ ವಾಡಿ ಕೈಸನ್ನೆಯಿಂದಾಕರವಂತೆ ಹೊನ್ನತಾಗುಬ್ಬಿಯಾಟಂಗಳಾಡಿ'

7 ಗಭಾಆ. 6–1 (ಹಿಡಿಗವಡೆ=ಕೈಯಲ್ಲಿ ಕವಡೆ ಹಿಡಿದು ಆಡುವ ಸರಿಬೆಸದ ಆಟ—(ಎನ್ಕೆ. ಕುಮಾರವ್ಯಾಸ ನಿಘಂಟು, ಪು. 145): ಗಭಾಸ, 13–13 (ಕವಡಿಕೆಯ ಜೂಜು)

7ಅ ನೋಡಿ, ಕಕನಿ, 1–118 (ಅಟ್ಟುಗುಳಿಯಾಟ): ಕಕನಿ, 3–2614 (ಗೊಟ್ಟುಗುೞಿ); ಕೈನೇಱಕಿರುದೊಟ್ಟಲಿನ ಬೊಂಬೆಗಳ ಎಳೆಮಿದುಳ ಕಜ್ಜಾಯ .. ಕಾಳಿಜದಟ್ಟುಗುಳಿಗಳ (ಗಭಾಭೀ 5–34); 'ಚೆದುರಂಗನೆತ್ತದ ಗಾರವದ ಗೊಟ್ಟುಗುೞಿಯುಂ ಮುಟ್ಟಿ ಮನೆಯೊಳ್ ಪದೆದಿರಿಸುಗೆ ತಾನುಂ ಕಲ್ವುದು'. (ಮದತಿ, 10–30); 'ಅಟ್ಟುಗೂೞಿಗೊಟ್ಟುಗುೞಿ ಮೊದಲಾಗೆಸೆವೊಟ್ಟು ಗೆಳೆಯನೊಡ ಗೂಡಿ....' (ಅಂಜ ಚ, 5–146); 'ಏಣಾಕ್ಷಿಯರೊರ್ವಳಾಡುವ ಗೊಟ್ಟು ಗುಳಿಯು....' (ಚಂಪ್ರಸಾ. 18–99): ನೋಡಿ, ಕಕನಿ, 3–2614); ಗುಳ್ಳೆಗೊಟ್ಟೆ (ಅಟ್ಟುಗುಳಿಯಾಟ) ನೋಡಿ, ಕಕನಿ, 3–2577) ಪಂಪಭಾ. 2–30.

8 ಕಕೀ, 120; ನೋಡಿ, ಚೇಕಾ, 2–27; ಜೈಭಾ. 6–39; ಹೋಲಿಸಿ: 'ನೆತ್ತ ಚದುರಂಗ ಪಗಡೆಯುಂ ಚಿತ್ತಾಯಂ ಬಯ್ದುದಾಯ ಬಿಡಿಬಿಲ್ ಸೋಗಳಿಯುತ್ತಮರಾಡರು, ಆಡಲ್ಬೆತ್ತಲೆಯುಹ ಭಂಗಬಪ್ಪ ನೆಂಬುದು'. (ನೀತಿ ಸಾ. 810)

9 ರಾಜ. 22–51; ಜಿನಭಾ. 36–45 'ಲೆತ್ತವಲಗೆಯುಹಾಸಿ ಚಿಟ್ಟೆಯುನಿತ್ತೆರದಿಸಾಲ್ಗೊಳಿಸಿ'.

10 ಗಭಾವೊ್ರೀ. 13-21, 33-50; ಜೈಭಾ. 6-31; ಬಸಪು. 11-13; 43-4; ಭವ್ಯ. 30-63: ಸವ. 344

11 ಪ್ರಿಕಾ, 16-16; ಸನತ್ಕುಚ, 15-57

12 ಗಭಾಸ, 13-21; ನಳಚ, 4-29

13 ಗಭಾಸ, 13-50; ನಳಚ, 4-29

14 ಸನತ್ಕುಚ, 15-51: ಜೈಭಾ, 6-31; ನೋಡಿ, ಗಿರಿಜಾ ಕಲ್ಯಾಣ 2-105 (ವ)

15 ರಾಜ, ಮಂತ್ರಿ, ಆನೆ, ಕುದುರೆ, ಕಾಲಾಳುಗಳೆಂಬ ಕಾಯಿಗಳನ್ನು ಇಟ್ಟುಕೊಂಡು 64 ಮನೆಗಳ ಪಟದಲ್ಲಿ ಆಡುವ ಆಟಕ್ಕೆ ಚದುರಂಗದಾಟ ಎಂದು ಹೆಸರು. ಚದುರಂಗದಾಟದ ಬಗೆಗೆ ಶೋಧಿಸಿದರೆ ಸಾಕಷ್ಟು ಸಾಹಿತ್ಯ ದೊರೆಯುತ್ತದೆ. ತ.ರಾ.ಸು. ರವರು 'ಚದುರಂಗದಮನೆ' ಎಂಬ ಕಾದಂಬರಿಯನ್ನೇ ರಚಿಸಿದ್ದಾರೆ. 'ಚದುರಂಗದ ಮನೆ'ಯನ್ನು ಕುರಿತು ಕವಿಗಳು ಪ್ರಸ್ತಾಪಿಸಿದ್ದಾರೆ: 'ಉಕ್ಕುವಾತುರಂಗ ಮನೆಯಿಂದಾಳುಮಂ ನೂಂಕೆ ದಕ್ಕಿ ತರಸನ ಹಿಂದೆ ಬಂದಾನೆ' (ಚೆಬಪು, 10-46) : 'ನೆಲನೊಡ್ಡಿನಿಂದ ಚತುರಂಗ ಮುಮೊರ್ಮೊದಲೆ ನಡುಗಿದುದು ಕೂಡಿದ ಚದುರಂಗದ ಮನೆಯನಲ್ಲಿ ದಂತಪ್ಪಿನೆಗಂ' (ಪಂಪಭಾ. 11-70)

15ಅ ಭವ್ಯ, 10-19; ಚದುರಂಗದಾಟದ ವರ್ಣನೆಗೆ ನೋಡಿ: ಸನತ್ಕುಚ, 15-52; ಮದತಿ, 10-30

16 ಕೃಷ್ಣದೇವರಾಯನು ತನ್ನ ಆಸ್ಥಾನಕವಿ ನಂದಿ ತಿಮ್ಮಣ್ಣನಿಗೆ ಅವನ ಲೆತ್ತ (ನೆತ್ತ) ದಾಟವನ್ನು ಮೆಚ್ಚಿ ಒಂದು ಅಗ್ರಹಾರವನ್ನೇ ದಾನವಾಗಿ ಕೊಟ್ಟನು. (ಪಾರಿಜಾತಾಪಹರಣ, The sources, p. 138); ಹಾಗೆಯೇ ಕೃಷ್ಣದೇವರಾಯನ ಮಗಳು ಒಳ್ಳೆಯ ಆಟಗಾರ್ತಿಯಾಗಿ ತನ್ನ ತಂದೆಯ ಜೊತೆ ಚದುರಂಗದಾಟವನ್ನು ಆಡುತ್ತಿದ್ದಳೆಂದು ಸುಬ್ರಹ್ಮಣ್ಯ ಪಂತಲು ಅವರು ಹೇಳುವರು. (Indian Antiquary, xvii p. 299)

17 ರಾಚ. 28-2

18 ನೋಡಿ, ಮೋತ, 20-20 ರಿಂದ 24; 'ನಾರಿಕೇಳಫಲವ ಕಟ್ಟಿ ತೂಗಿ ಬೀಳಲಿರಿದು ಕೊಲುವಂತೆ ತೆಂಗಿನಕಾಯ ಹೋಳಮಾಡಿದರು ಜೂದಿನಲಿ'

19 ಮೋತ, 20-20

20 ಮೋತ, 20-25

21 ಮೋತ, 20-26

22 ನೋಡಿ, ರಾಜ, 30-17; ತುರಂಗ, 11-1

22ಅ 'ಗುರಿಗುತ್ತು' ಎಂಬ ಪ್ರಯೋಗ ಮತ್ತೊಬ್ಬ ಕವಿಯ ಆಟದ ವರ್ಣನೆಯ ಸಂದರ್ಭದಲ್ಲಿ ದೊರೆಯುತ್ತದೆ: 'ನೂರಾರು ಮಕ್ಕಳು.... ನಲಿದಾಡುತ್ತಿದ್ದರು ವಿನೋದದಿಂ ಚೆಂಡಾಟ ಚನ್ನಾಣೆಯಂ ಹಿಡಿಗವಡೆಗುರಿಗುತ್ತು ಸೆಣಸಾಟ ತಮ್ಮೊಳಗೆ' (ತುರಂಗ, 11-1). ಇದೊಂದು ಬಗೆಯ ಆಟ ಎಂದು ನಿಘಂಟು ವಿವರಣೆ ನೀಡುತ್ತದೆ. 'ಗುರಿಯಾಳು ಚಿಂಡಿನ ಹೂಣಕೆ' ಎಂಬ ಅರ್ಥದಲ್ಲೆ ಇದೂ ಒಂದು ಆಟ ಇರಬಹುದೆ? ಬೇರೆಲ್ಲೂ ಈ ಪದ ಪ್ರಯೋಗವಾಗಿಲ್ಲ.

23 ಚಿಣಿಕೋಲು ಬಹಳ ಹಿಂದಿನಿಂದಲೂ ಬಹು ಜನಪ್ರಿಯ ಆಟವಾಗಿದ್ದಿತೆಂಬುದಕ್ಕೆ ನಮ್ಮ ಕವಿಗಳು ಆ ಆಟದ ಹೆಸರನ್ನು ಪ್ರಸ್ತಾಪಿಸಿರುವುದೇ ಸಾಕ್ಷಿ. ಈ ಕೆಲವು ಕೃತಿಗಳಲ್ಲಿ ಇಂದಿಗೂ ಜನಪ್ರಿಯವಾಗಿರುವ ಚಿಣಿಕೋಲು, ಚೆಂಡು, ಬುಗುರಿ–ಮುಂತಾದ ಆಟಗಳ ಹೆಸರನ್ನು ಕಾಣಬಹುದು :

ಪುಕೀ, 1–13–2, 2–82–1 (ಚೆಂಡುಬುಗುರಿ ಚಿಣ್ಣಿಕೋಲಾಟವಾಡುತ....); ಚಂದ್ರಹಾ, 1–35 (ಲಗ್ಗೆ ಚೆಂಡುಬುಗುರಿ ಚಿನ್ನಿಗಳು); ಪ್ರಸಭಾ, 50-25 (ಚಿಣ್ಣೆಬೊಗರೆ ಚೆಂಡು ಗುಮ್ಮಗುಸುಕು ಹಿಡಿ ಅಣ್ಣೆಕಲ್ಲು)

23ಅ ಗುಮ್ಮಗುಸುಕು—ಎಂಬುದು ಮತ್ತೊಂದು ಆಟದ ಹೆಸರು. 'ಗುಮ್ಮಗುಸುಕು ಹಿಡಿಅಣ್ಣೆಕಲ್ಲು' (ಪ್ರಸಭಾ, 50–25). ಇದು ಬಹುಶಃ ಗೊತ್ತಿನಚೆಂಡು, ಗುಮ್ಮನ ಬಡಿವಕತ್ತಲೆ ಗುದ್ದು–ಆಟಗಳ ತರಹ-ಗೋಪ್ಯ ರಹಸ್ಯ ಭೇದನೆಯ ಒಂದು ಆಟವಿರಬಹುದೆ?

23ಆ ಗಿಲಿಗಿಲಿಗಂಭ 'ಬಾಲಕಂನಲಿನಲಿದಾಡುವ ಗಿಲಿಗಿಲಿಗಂಭ ಗಳಪ್ಪೂರು ದಂಡಂಗಳ್' (ಬಸರ 2–33)

24 ಚಿಟ್ಟುಮುರಿಯಾಟಕ್ಕೆ 'ಮುಟ್ಟಾಟ, ಜೂಜಾಟ' ಎಂದು ನಿಘಂಟು ಅರ್ಥ ಹೇಳುತ್ತದೆ. (ಕಕನಿ, 3–2826) ಇನ್ನೂ ಒಂದೆರಡು ಕೃತಿಗಳಲ್ಲಿ ಈ ಆಟದ ಹೆಸರು ಕೇಳಿಬರುತ್ತದೆ. ನೋಡಿ, ತೊರರಾ, 6–35–44. (ಪುಟನೆಗೆದನಂಬರದೊಳುಚಿ ಚಿಟ್ಟುಮುರಿಯಾಡುವ ನಳಾದಿಪಟುಭಟರ); ನಾರಣಪ್ಪ ಇನ್ನೊಂದು ಸಂದರ್ಭದಲ್ಲಿ ಕೊಡುವ 'ಜುಂಜಟ್ಟಿ ಹಾಯ್ಕಿಕೊಂಡು ನುಣ್ಣನೆ ಚಿಟ್ಟುಮುರಿಯಾಟದಲಿ ಸವೆದನು ಮತ್ತೆ ಕೌರವನ' (ಗಭಾಅ, 6–14) ಎಂಬ ವಿವರಣೆ ಮತ್ತೊಂದು ಅರ್ಥವನ್ನು ಸೂಚಿಸುವಂತಿದೆ; (?) ಹರಿಶ್ಚಂದ್ರ ಕಾವ್ಯದಲ್ಲಿ ಬರುವ ಒಂದು ವರ್ಣನೆ ಇನ್ನೂ ಸ್ವಾರಸ್ಯವಾಗಿದ್ದು ಹೆಂಗಸರು ಈ ಆಟವನ್ನು ಆಡಿದಂತೆ ಹೇಳಿದೆ. ('ಹಂಸೆಹಂಸೆಗಟ್ಟುಂಬರಿವೊಲು ಪದಪದಂ ಮೆಚ್ಚಿಯೆ ಚಿಟ್ಟುಮುರಿಯಾಡುತಿರ್ದರು ಸತಿಯರು' (ಹಚಕಾ. 4–10)

25 ಭವ್ಯೆ, 12–79; ರಾಚ, 30–17; ಪುಕೀ. 2–82–1

26 ನೋಡಿ, ರಾಚ, ಸಂಧಿ, 31

27 ರಾಚ, 31, 28 ರಿಂದ 31

28 ರಾಚ, 31–67 [ಅರಸು ಮಕ್ಕಳ ಚೆಂಡಾಟವೆಂದರೆ ಕಾಲಿಗೊಬ್ಬರು ಕೈಗೊಬ್ಬರು ಸಹಾಯಕರಿರುತ್ತಾರೆ. ಇಂದಿಗೂ ಶ್ರೀಮಂತ ಆಟವೆನಿಸಿದ ಟೆನಿಸ್ ಆಟದಲ್ಲಿ ಚದುರಿದ ಚೆಂಡನ್ನು ತಂದುಕೊಡಲು ಸೇವಕರು ಇರುವುದನ್ನು ಕಾಣಬಹುದು]

29 ರಾಚ, 30–17, 18

30 ತನ್ನ ಮಗ ಚೆಂಡಾಟದಲ್ಲಿ ತೊಡಗುವುದನ್ನು ತಪ್ಪಿಸಲು ಹರಿಯಲಾದೇವಿ ಈ ನೆಪವನ್ನು ಒಡ್ಡಿರಬೇಕೇ ಹೊರತು ಅಂತಸ್ತಿನ ಪ್ರಶ್ನೆ ಬಂದಿರಲಾರದು. ಇದರಿಂದ ಚೆಂಡಾಟವೆಂಬುದು ಆ ಕಾಲದಲ್ಲಿ ಸಾಮಾನ್ಯರಿಗೆ ಮಾತ್ರ ಸೀಮಿತವಾಗಿತ್ತು. ರಾಜ ಕುಟುಂಬದವರಿಗಲ್ಲ ಎಂದು ಭಾವಿಸುವಂತಿಲ್ಲ ಎಂಬ ವಾದಕ್ಕೂ ಅವಕಾಶವಿದೆ.

31 ವಿಶಾಲ ಅರ್ಥದಲ್ಲಿ ವಿವೇಚಿಸಿದರೆ ಈ ಬಗೆಯ ವರ್ಗೀಕರಣ ಸಾಧುವಲ್ಲವೆನಿಸುತ್ತದೆ. ವಾತ್ಸ್ಯಾಯನನ ಕಾಮಸೂತ್ರದಲ್ಲಿ ಹೇಳಿರುವ 64 ಕಲೆಗಳಲ್ಲಿ ಲಲಿತಕಲೆಗಳೆಂದು ಕರೆಸಿಕೊಳ್ಳುವ ಸಂಗೀತ, ಸಾಹಿತ್ಯ, ನೃತ್ಯಕಲೆಗಳಿಂದ ಹಿಡಿದು, ಲಾವಕುಕ್ಕುಟ ಮೇಷಾದಿ ಯುದ್ಧಕಾರಣ ಕೌಶಲ, ಇಂದ್ರಜಾಲ, ಮಹೇಂದ್ರಜಾಲ, ವ್ಯಾಯಾಮಕೀಯ ವಿದ್ಯೆಗಳ ಜ್ಞಾನದ ಹೆಸರುಗಳೂ ಇವೆ. ಆದ್ದರಿಂದ ವ್ಯಾಯಾಮಕೀಯ ವಿದ್ಯೆಗಳ ನ್ನಾಗಲೀ, ಮೇಷ ಕುಕ್ಕುಟಾದಿ ಮೃಗಗಳ ಕಾಳಗವನ್ನಾಗಲೀ ಕಲೆಯ ಪ್ರಪಂಚದಿಂದ ಹೊರತಾಗಿ ಇಡಲು ಸಾಧ್ಯವಿಲ್ಲ. ಮಾಡುವ ಪ್ರತಿಯೊಂದು ಕೆಲಸದಲ್ಲೂ ಕಲೆಗಾರಿಕೆ ಇದ್ದೇ ಇವೆ. (ನೋಡಿ, ಶ್ರೀವತ್ಸ, ಪು. 93–7)

32 ರಾಚ, 28–34; ನೋಡಿ, ಸೊಸೋ, 4–44; ಚಿಕವಂ, 6–16 (ಮಿಕ್ಕಪೊಲ್ತಿಂ ಕೋಳಿತಗರ್ಗಳಜೂದುಗಾಳಗದೊಳ್ ಕಳೆದು); ಕಂನವಿ, 22–99. ('ಕಾದಿಸಿ ತಗರಮಲ್ಲರ ಕಾಳಗದ ವಿನೋದದೊಳಗೆ ಪೊತ್ತುಗಳೆದು....'); ನೋಡಿ, ಅನಂಪು, 11–26, 27.

33 ರಾಚ, 4–76; ನೋಡಿ, ಕಂನವಿ, 7–17

34 ರಾಚ, 4-78, 79; ಗಭಾಉ, 1–30 (ತಗರೆರಡಖತಿ ಗೊಳಿಸಿ ಬಲುಗಾಳಗವ ನೋಡುವ); 'ಚಾವುಂಡರಾಯ ಪುರಾಣ'ವು (224) ಜೆಟ್ಟಿಕೋಳಿಯ ಹೆಸರನ್ನು ಹೇಳುತ್ತದೆ! ಹಾಗೆಯೇ ಕಂನವಿ, 7–12,15, ಕುಕ್ಕುಟ ಕಾಳಗದ ವಿಚಾರವನ್ನು ಹೇಳುತ್ತದೆ.

35 ರಾಚ, 4–80: ನೋಡಿ, ಕಂನವಿ, 7–10 ರಿಂದ 16 ಪದ್ಯಗಳು. ಗೂಳಿಕಾಳಗಕ್ಕೆ–ನೋಡಿ, ಕಂನವಿ, 7–16

36 ನೋಡಿ, ಮೈಸೂರ್ ಆರ್ಕಿಲಾಜಿಕಲ್ ರಿಪೋರ್ಟ್ (MAR) 1914–15, ಪು. 59

37 ನೋಡಿ, ಭವ್ಯ, 20-49 ರಿಂದ 58; ಗೋವಿಂದವೈದ್ಯ 'ಮಹಾನವಮಿಯೊಡ್ಡೋಲಗದ ಉತ್ಸವ'ದಲ್ಲಿ ಈ ಸಂದರ್ಭವನ್ನು

ಹ್ರಸ್ವವಾಗಿ ಹೇಳುತ್ತಾನೆ: "ತುರಗಾರೋಹಕರ್ಕೈತಂದುಕುದುರೆಯು। ಬಿರುದಿನೇರಾಟವತೋರಿ। ದೊರೆರಾಯಕಂಠೀರವಗೆ ಕೈಮುಗಿದಾಗ। ಹರುಷದೆ ಭಾರಿಮಾಡಿದರು." (ಕಂನವಿ, 21–56); "ನಲವಿಂದ ಮಾರ್ಬಲಗಳನಿಬ್ಬಗೆಯೊಳು। ನಿಲಿಸಲುತ್ತಮವಾಜಿಯನು। ತೊಲಗು ವೇಷೆಯ ರವೆಗಾಲು ಬಂಬೀರಿಯೊ। ಳ್ನಲಿದೇರಿ ಮೆರೆಯುತರ್ತಿಯಲಿ" (ಕಂನವಿ 22–94);

"ಹರಿಯುಲಂಘನೆ ಗುರುತ್ಮನವೇಗ ದೃಢಗತಿ। ಬಿರುದಿನಚರಣತ್ರಯದ। ಮೆರವಚಮ್ಮಟಿಗೆಯ ಚಪಲಗತಿಯನಾಗ। ತುರಗದೊಳಗೆ ತೋರಿಸಿದ" (ಕಂನವಿ, 22–95)

"ತುರಗವನಿಳಿದು ಪಟ್ಟದಮದದಾನೆಯ। ಸಿರಕೆ ಲಂಘಿಸಿ ತೂಳಿಸುತ। ಹರುಷದೆಬೀದಿವರಿಸಿ ಸಂತೋಷವ। ಪಿರಿದು ಪುಟ್ಟಿಸಿದ ನೋಳ್ಪರಿಗೆ". (ಕಂನವಿ, 22–97)

38 ಭವ್ಯೈ, 20–63, 64; ಕಂನವಿ, 21–55 (ಕರಿಯ ಕುಂಭ ಸ್ಥಳಕಂಕುಶಗಳನೊತ್ತಿ। ಭರದಲಿ ನಡೆಸಿತಂದಾಗ। ನರಸೇಂದ್ರ ನಂಘ್ರಿಗೆ ನಮಿಸಿ ಜೋದರುಗಳು, ಹರುಷದೆ ಭಾರಿ ಮಾಡಿದರು).

39 ಭವ್ಯೈ, 23–27 ರಿಂದ 31; ಅಶ್ವಶಿಕ್ಷಕರ ಕೈಚಳಕ ಸಾಮರ್ಥ್ಯ ಪ್ರದರ್ಶನದ ವರ್ಣನೆಗೆ, ನೋಡಿ, ಗಿರಿಜಾಕಲ್ಯಾಣ 2-105 (ವ).

40 ಭವ್ಯೈ, 30–77, 78; ಹೋಲಿಸಿ, ಕಂನವಿ, 22–98

41 ಭವ್ಯೈ, 23–33, 34, 35; ರತ್ನಾಕರ ಕೊಡುವ ಈ ವರ್ಣನೆಯನ್ನು ಪ್ರವಾಸಿ ಅಬ್ದುರ್‌ರಜಾಕನು ಕೊಡುವ ವರ್ಣನೆಯೊಂದಿಗೆ ಹೋಲಿಸಿ. ನೋಡಿ, ಪ್ರಕಂಇಂ, 2, ಪು. 165

42 ಶ್ರೀವತ್ಸನಿ, ಪು. 100; ನೋಡಿ, ರಾಮವಿ, 18–179; ಶಂಕದಾ, 10–16

43 ಭವ್ಯೈ, 20–41–45, ನೋಡಿ, ಕಂನವಿ, 21–117 "ಒಂದು ದೆಸೆಯೊಳಿಂದ್ರ ಜಾಲವ ತೋರುವವಂದಿ...."

44 ಭವ್ಯ, 20–40 "ರಾಜ ಚಿತ್ತೈಸೆಂದು ವಿಸ್ಮಯಕಾರನು ಬೀಜ ಮಂತ್ರವನೊಂದು ನೆಟ್ಟು ಭೂಜವಾಯ್ತಾಗಳೆ ಕಾಯಾಯ್ತು ಹಣ್ಣಾಯ್ತು ಸೋಜಿಗವಟ್ಟುದಾಸ್ಥಾನ". ಲಾಲಿಸೊಡೆಯನೆ ಎಂದು ಗೋವಿಂದಗತಿಕಾರ ಬಾಲತೃಣವ ಮಂತ್ರಿಸಿಟ್ಟ.

45 "ಅವರವರಂಗವನರಿದು ವಿದ್ಯಾಧಿಕನಿವಹಕೆ ಸೂರೆಚಾಗವನ ನವನಿಧಿಯಾಗಿಕೊಟ್ಟನು. ಕೊಡುವಾಗ ಮತ್ತವಸಕ್ಕೆಗೆಡೆತಡೆಯುಂಟೆ" (ಭವ್ಯ. 20–46).

46 ಭವ್ಯ, 20–38; ನೋಡಿ, ಕಂನವಿ, 21-97 'ಲಘುಲಾಗು ಲಂಗನೆಯೊಳು ಗಳೆಮಿಳಿಯಲಿ। ಯುಗಣಿತರಹಡೊಂಬರುಗಳು। ಬಗೆ ಬಗೆಯಾಟವತೋರಿಯಾಸ್ಥಾನವ। ಮಿಂಗೆ ಮೆಚ್ಚಿಸಿದರೇವೇಳ್ವೆ.'

47 ಮೋಳಿಗೆಮಾರಯ್ಯನ ವಚನ, 132; 'ಕೋಳಿಯಂತೆ ಕೂಗಿ ಡೊಂಬರಂತೆ ಕೂಡಿ ಆಡಿಬಾಗಿ ಹಿಂಗದಿದ್ದಡೆ ಕೊಂಡಾಡುವ ಈ ಲಾಗ ನೋಡಿ ಕೊಳ್ಳಿ' (ಏಲೇಶ್ವ, 434–35).

48 ಗಣೆಯ ಮೇಲೆ ಪ್ರದರ್ಶನ ನಡೆಸುತ್ತಿದ್ದ ಯಲ್ಲಕ್ಕನೆಂಬ ಡೊಂಬಿತಿ ಬಿದ್ದು ಪ್ರಾಣತ್ಯಾಗ ಮಾಡಿದ್ದರಿಂದ ಅವಳ ಹೆಸರಿನಲ್ಲಿ ಒಂದು ವೀರಸ್ಮಾರಕವನ್ನು ನಿರ್ಮಿಸಿದರು. (MAR, 1938, p 222);

ಮಂತ್ರವಾದಿಗಳು, ಅಲೆಮಾರಿಗಳು ಡೊಂಬರು ಮುಂತಾದ ಅಲೆಮಾರಿ ಜನಗಳ ಸಹಾಯಾರ್ಥವಾಗಿ ಸ್ಥಳೀಯ ಅಧಿಕಾರಿಗಳು ಜನರಿಂದ ಹಣವನ್ನು ಸಂಗ್ರಹಿಸುತ್ತಿದ್ದರೆಂದು ಒಂದು ವರದಿ ಹೇಳುವುದು. (331 of 1920 Qtd AASL, p. 68)

**ಡೊಂಬರ ಕುಣಿತ**

49 ಡೊಂಬರ ಕುಣಿತ ಇದ್ದಲ್ಲಿ ಜನ ಸೇರುತ್ತಾರೆ ಎಂಬುದು ರೂಢಿ ಮಾತು. ಕಲೆಗಾರಿಕೆಯಿಲ್ಲದೆ ಕುಣಿಯುವ ಕುಣಿತಕ್ಕೆ ಡೊಂಬರ ಕುಣಿತ ಎಂದು ಕರೆಯುವುದು ವಾಡಿಕೆ 'ರಂಭಾ ನೃತ್ಯಕಂ ಡೊಂಬರೆ' ಎಂಬ ಸೋಮೇಶ್ವರನ ಮಾತು (ಸೋ ಶ, 3) ಇದೇ ಅರ್ಥವನ್ನು ಸೂಚಿಸುತ್ತದೆ. ರಂಭೆಯ ನೃತ್ಯಕ್ಕೂ ಡೊಂಬರ ಕುಣಿತಕ್ಕೂ ಎಲ್ಲಿಗೆಲ್ಲಿಗೆ ಸಂಬಂಧ ಎಂದು ಹೋಲಿಕೆ ಮಾಡಬಹುದು. ಆದರೆ ಜನಪದ ಸಾಹಿತ್ಯ

ದಲ್ಲಿ ಡೊಂಬರ ಕುಣಿತ ತನ್ನದೇ ಆದ ಸ್ಥಾನವನ್ನು ಪಡೆದಿದೆ. ‘ ಕುಮಾರ ರಾಮ ’ನಿಗೆ ಸಂಬಂಧಿಸಿದ ಹಾಡುಗಳನ್ನು ಹಾಡಿಕೊಂಡು ಡೊಂಬರು ಆಚರಿಸುವ ಹಬ್ಬಗಳ ಸಂದರ್ಭದಲ್ಲಿ ಡೊಂಬರ ಹೆಂಗಸರು ಮಾಡುವ ಒಂದು ಬಗೆಯ ಜಾನಪದ ನೃತ್ಯಕ್ಕೆ ಡೊಂಬರ ಕುಣಿತ ಎಂದು ನಿಘಂಟು ವಿವರಣೆ ನೀಡುತ್ತದೆ. (ನೋಡಿ, ಕಕನಿ, 4-4093)

**ಡೊಂಬರ ಲಾಗ**

50 ಡೊಂಬರು ಗಣೆ ಹತ್ತಿ ತಲೆಕೆಳಗು ಮಾಡಿ ಹಾರುವುದಕ್ಕೆ ಡೊಂಬರಲಾಗ, ತಿಪ್ಪರಲಾಗ ಎಂದು ಹೆಸರು. ಡಂಭಕ ಭಕ್ತಿಗೆ ಮೆಚ್ಚ ಕೊಡನು ಕೃಷ್ಣ. ಡೊಂಬಲಾಗವಹಾಕಿಡೊಂಡೊಂಡೆ ಹೊರಳಿದರಿಲ್ಲ ( ಪುಕೀ, 5-138)

**ಡೊಂಬರ ಕೋಡಗ**

51 ಡೊಂಬರ ಕೋಡಗ ಡೊಂಬ ಆಡಿಸಿದಂತೆ ಆಡುವುದು. ಮತ್ತೊಬ್ಬರ ಪ್ರೇರಣೆಯಂತೆ ಕಾರ್ಯವೆಸಗುವವನನ್ನು ‘ ಡೊಂಬರ ಕೋಡಗ ’ ಎಂದು ಕರೆಯುವುದು ರೂಢಿ. ‘ ದುರ್ಯೋಧನಂ.... ಡೊಂಬರಕೋಡಗದಂತೆ ಆಡಿಗೆಲ್ದಾಗಳ್ ’ (ಪಂಪ ಭಾ, 6-72 (ವ) )

52 ಡೊಂಬರಾಟದ ನಾನಾವಿಧವಾದ ವರ್ಣನೆಗಳಿಗೆ, ನೋಡಿ, Elliot History of India IV p. 118-19; ಅಬ್ದುರ್ ರಜಾಕ್, ಪ್ರ ಕಂ ಇಂ, 2. ಪು. 165-6.

53 ಕವಿಚ, II ಪು. 337; ಡೊಂಬರ ಡೋಳಿಗೆ ‘ದಡ್ಡಸ’ ಎಂದು ಹೆಸರು. ದಡ್ಡಸಮೆನಲ್ ಡೊಂಬರೂದುವವಾದ್ಯ (ಕಕನಿ, 4-3791)

54 ನೋಡಿ, BAS, Spl, II, p 408-16 (Games's amusements); TVM, AASL, p. 290-8.

55 ರಾಜನು ನಿತ್ಯವೂ ಬೆಳಕು ಹರಿಯುವ ಮುನ್ನ ಸ್ವಲ್ಪ ಎಳ್ಳೆಣ್ಣೆಯನ್ನು ಕುಡಿದು ಮೈಗೂ ತಿಕ್ಕಿಕೊಳ್ಳುತ್ತಾನೆ. ಬಟ್ಟೆಬರೆಗಳನ್ನು ತೆಗೆದು ಬರಿ ಚಡ್ಡಿ ಹಾಕಿಕೊಂಡು ಬಹಳ ತೂಕದ ಮಣ್ಣಿನ ಗುಂಡುಗಳನ್ನು ಕೈಯಲ್ಲಿ ಎತ್ತಿ ಆಡಿಸಿ ಕಸರತ್ತು ಮಾಡುತ್ತಾನೆ. ಕತ್ತಿವರಸೆ

ಮಾಡುತ್ತಾನೆ. ತನ್ನ ಜಟ್ಟಿಗಳಲ್ಲಿ ಒಬ್ಬನೊಡನೆ ಕುಸ್ತಿಮಾಡುತ್ತಾನೆ. ಈ ರೀತಿ ತಿಕ್ಕಿದ ಎಣ್ಣೆಯೆಲ್ಲಾ ಬೆವರಾಗಿ ಹೊರಗೆ ಬರುವವರೆಗೂ ಕಸರತ್ತು ಮಾಡುತ್ತಾನೆ. ನಂತರ ಮೈದಾನದಲ್ಲಿ ಬೆಳಕು ಹರಿಯುವ ವರೆಗೂ ಕುದುರೆ ಸವಾರಿ ಮಾಡುತ್ತಾನೆ. ಆಮೇಲೆ ಸ್ನಾನ ಮಾಡು ತ್ತಾನೆ. (ಪ್ರ ಕಂ ಇಂ, 2, ಪು. 364)

56 ನೋಡಿ, ಭಾ ಸಂ, ಪು, 243

57 ಜಟ್ಟಿಗಳಿಗೂ ದೇವದಾಸಿಯರಿಗೂ ವಿಜಯನಗರದ ಅರಸರು ವಿಶೇಷ ಮನ್ನಣೆಯನ್ನಿತ್ತಿದ್ದರು. "ಇವರುಗಳು ರಾಜನ ಸಮ್ಮುಖದಲ್ಲಿ ಕುಳಿತು ವೀಳೆಯ ಅಗಿಯಬಹುದು. ಇವರನ್ನು ಬಿಟ್ಟರೆ ಬೇರೆಯವರು ರಾಜನ ಮುಂದೆ ವೀಳೆಯ ಅಗಿಯುವಂತಿಲ್ಲ." (ಪಾಯೇಸ್, ಪ್ರಕಂಇಂ, 2, ಪು. 374).

ಅಂದರೆ ಈ ನಿದರ್ಶನ ಮಲ್ಲರು ದೇವದಾಸಿಯರೂ ರಾಜನ ಸನಿಹದಲ್ಲಿ ಹೋಗಿ ಕುಳಿತು ವೀಳೆಯ ಮೆಲ್ಲುವಷ್ಟರಮಟ್ಟಿನ ಸಲಿಗೆ ಸ್ವಾತಂತ್ರ್ಯ ವನ್ನು ಗಳಿಸಿ ರಾಜನ ಮೆಚ್ಚುಗೆಗೆ ಪಾತ್ರವಾಗಿದ್ದರು ಎಂಬುದನ್ನು ಸೂಚಿಸುತ್ತದೆ. (ನೋಡಿ, Sewell, Forgotten Empire, p. 259)

58 ನೋಡಿ, ಗಭಾಉ, 2–27; ಮಅಪು, 4–6 (ಜಗಜಟ್ಟಿ). ಭವ್ಯೆ, 1–64; ಜೀಚ, 7–56; "ಕ್ರಮುಕ ಬೆಳ್ಳೆಲೆಗರು ಜಟ್ಟಿಗ ಗೀತ ಪಾಠಕರು." (ಮೋತ, 36-43)

59 ಚೆೀಕಾ, 11–23; ಭವ್ಯೆ, 20–38, 39; ಕಂನವಿ, 21–90; ಗಿರಿಜಾಕಲ್ಯಾಣ, 2-105 (ವ); ಕಾವ್ಯಸಾರ, 65.

ನವರಾತ್ರಿ ಹಬ್ಬದ ಸಮಯದಲ್ಲಿ ನಡೆಯುವ ಜಟ್ಟಿಕಾಳಗದಲ್ಲಿ ಭಾಗವಹಿಸಲು ಒಂದು ಸಾವಿರಜನ ಮಲ್ಲರನ್ನು ದೊರೆ ಹೊಂದಿದ್ದನೆಂದು ನ್ಯೂನಿಜ್ ಹೇಳುತ್ತಾನೆ. (FE, P.359)

60 ನೋಡಿ, ಚೇಕಾ, 1–27; ರಾಚ, 4–76, 22–52 (ಮಲ್ಲಗಂಬ); ಭವ್ಯೆ, ಸಂಧಿ 63 ನ್ನು ಪೂರ್ತಿ ನೋಡಬಹುದು; ಜಟ್ಟಿ ಗರುಡಿ, (ಚಿಕವಂ, 168); ಜಟ್ಟಿಗಾಸೆ (ಹಮ್ಮೀರ, 3–32 (ವ)

61 ನೋಡಿ, ಗಭಾಸ, ಸಂಧಿ 3, ಪದ್ಯಗಳು 97–102

62 ಹೋಲಿಸಿ, ಕಂನವಿ, 21–92 "ಗಳ ಹತ್ತಡೊಕ್ಕರ ತಳ ಮೇಲು ಪೈಸರ। ಸುಳಿವು ವಂಚನೆ ಪತನದಲಿ। ಅಳವಟ್ಟಗಾಯ ಗಾಯಕೆ ಕೆನ್ನೀರ್ಗಳುತುಳುಕೆ ಹೋರಿದರೇನೆಂಬೆ."

63 ಹೋಲಿಸಿ, ಕಂನವಿ, 21–93 'ಬಿಗಿವ ಬಿಡಿಸಿ ಕೊಳ್ವತಗೆವ। ತವಕಿಸುವ। ನೆಗೆವ ನಿಗುರಿಯೊಳಸರಿವ। ಲಗಡಿನಂತೆರಗಿಲಾಗಿಸುವ ಹೋರಾಟದ। ವಿಗಡಮಲ್ಲರುಗಳೊಪ್ಪಿದರು; ನೋಡಿ, ಗಿರಿಜಾ ಕಲ್ಯಾಣ 2–105. (ವ)

64 "....The King has a thousand wrestlers for these feasts who wrestle before the king but not in our manner for they strike and wound each other with two circlets with points, which they carry in their hands to strike with and the one most wounded goes and takes his rewarded in the shape of a silk cloth such as the King gives to these wrestlers" (Nuniz, Sewell, FE (1970) p. 359.

65 ನೃತ್ಯವಾದ ಮೇಲೆ ಜಟ್ಟಿಕಾಳಗ ನಡೆಯುತ್ತದೆ. ಇವರ ಕಾಳಗ ನಮ್ಮ ಕಾಳಗದಂತಲ್ಲ. ಕಾಳಗದಲ್ಲಿ ಏಟುಗಳು ಬೀಳುತ್ತವೆ. ಕೆಲವು ವೇಳೆ ಹಲ್ಲು ಮುರಿದು ಕಣ್ಣು ಕುರುಡಾಗುತ್ತದೆ. ಮುಖ ಮೋರೆ ಜಜ್ಜಿಹೋಗುತ್ತವೆ. ಪ್ರಜ್ಞೆ ತಪ್ಪಿದ ಕೆಲವರನ್ನು ಹೊತ್ತುಕೊಂಡು ಹೋಗುತ್ತಾರೆ. ಒಳ್ಳೆ ಪಟ್ಟು ಹೊಡೆದು ಬೀಳಿಸುತ್ತಾರೆ. ಈ ಕುಸ್ತಿಗಳನ್ನು ತೀರ್ಪುಗಾರರು ನೋಡುತ್ತಿದ್ದು ಗೆದ್ದವರು ಯಾರೆಂದು ನಿರ್ಧರಿಸುತ್ತಾರೆ. (ಪಾಯೇಸ್, ಪ್ರಕಂಇಂ, 2, ಪು. 376.)

66 ನೋಡಿ, SPL, II, p. 417; AASL, P. 290–2

67 ನೋಡಿ, SPL, II, P. 420

68 Raghunathabhudayam, The Sources, P.265 Qtd in SPL II, P. 420

69 ಗಭಾಉ, 2–27: ಮಅಪು, 4–6; ಜೀಚ. 7–56;

70 ಭರತೇಶ ವೈಭವದ 63ನೆ ಸಂಧಿಯಲ್ಲಿ ಮಲ್ಲ ಹಾಗೂ ಖಡ್ಗ ಯುದ್ಧಗಳ ಸೊಗಸಾದ ವರ್ಣನೆಗಳಿವೆ. ಖಡ್ಗಯುದ್ಧದ ವರ್ಣನೆಗೆ ಈ ಕೆಲವು ಪದ್ಯಗಳನ್ನು ನೋಡಿ:

"ಮುರಿದುಟ್ಟಕಾಸೆ ಚಿಮ್ಮುರಿ ಬಿಟ್ಟ ಜಡೆಪಾದ। ಸರಿವಿಟ್ಟ ಸಾದಿನ ಬೊಟ್ಟು। ಕರದಲಿ ಸಾಣ ಖಂಡಯವೊಪ್ಪೆ ಕೆಲರುಸಿಂ। ಗರಿಸಿ ಸಾಧನೆಗೆದ್ದರವರು" (63–14); "ಬಾಳೀಂದುಕ್ಕೈದುವನುದ್ದ ಕಿಟ್ಟಾಂತುಸು। ತ್ತಾಳಿಸಿ ಖಡ್ಗಖಡ್ಗದೊಳು। ಏಳಡಿ ಹಿಂದು ಮುಂದಕೆ ನೆಗೆದರು ಹಾಗೆ। ಕೋಲುವಿಡಿದು ನಮಿಸಿದರು; ಹೋಳಾಗಿ ನಿಂದವ್ಮೈ ಮುಂದ ಕೊತ್ತಿದ ಬಲ। ಗಾಲು ಹಿಂದೆಡಗಾಲು। ಕೋಲುವಿಡಿದು ನೀಡಿದಾ ಬಲದೋಳಿಂದ ಸಾಲೊಳಾಯತವಾದರವರು." (ಭವೈ, 63–22, 23) "ತಳಸಂಚು ಮೇಲ್ಸಂಚು ಹಿಂಕೋರೆ ಮುಂಕೋರೆ। ಬಲಸನ್ನೆಯಡದ ಸನ್ನೆಯೊಳು। ಅಲಗನೀಡಿದರಲಗಿನೊಳಾಂತು ನೆಗೆದು। ವ್ಮೈ ಹೊಳೆದು ತಪ್ಪಿಸಿದನೆಲ್ಲವನು (63–27);" "ಗತಿಪಸರ ವಡಾಯುವಂಕತಿಕೆ.... ಎಂಬ ಚತುರತಾಣದ ತರಹದೊಳ್ ಖಡ್ಗಮುಂಜಡಿದರು." (ಸೋಮುಚ, 5–14) (ಅಂಕತಿಕೆ= ಒಂದು ಬಗೆಯ ಕತ್ತಿವರಸೆ)

71 ನೋಡಿ, P. K. Gode; Studies in Indian Cultural History, Vol II (1960). ಈ ಸಂಶೋಧನಾಕೃತಿಯಲ್ಲಿ "The History of fire works in India between A.D. 1400 and 1900. ಎಂಬ ಲೇಖನ. ಪುಟ. 31.

72. ಕಂನವಿ, 21–124 ರಿಂದ 126; 'ಬಿರಿಸು ಬಾಣಗಳಾಗ ಮೆರೆದ ಸಂಭ್ರಮವನೇವೇಳ್ವೆ.,....ಮೊರೆದುದುದೀಧಿತಿಗೂಡಿ ಚಕ್ರ ಬಾಣಗಳಂದರಸನೋಲಗದೊಳೊಪ್ಪಿದವು; .. ಸೂತ್ರಗಂಭ ಬಾಣಗಳುರೆ ಪರಿವ ಸಂಭ್ರಮವನೇನೆಂಬೆ

73 ವಿಸ್ಥಾವ, 12–40 (ವ)

74 ನೋಡಿ, ಕಟ್ಟಿಶೇಷಾಚಾರ್ಯ, ಕವಿ ಕನಕದಾಸರು, ಪು. 182–3; ಮೋತ, 14–28

75 ನೋಡಿ, ಮೋತ, ಸಂಧಿ, 14. (ಜಲಕ್ರೀಡೆ); ಬೆಟಗೇರಿ, ಕಜಜೀ, ಪು. 81–3; ಕವಿ ಕನಕದಾಸರು, ಪು. 182; ಚೇ ಕಾ, 3–8, 7–24.

76 ರಾಚ, 27–109, 110; ಮತ್ತು ಅದೇ, 27–100.

77 ಈ ಪ್ರವಾಸಿ 'ಕೆನೆರಿಯನ್ಸ್' (ಕನ್ನಡಿಗರು) ವಿಚಾರವಾಗಿ ಹೇಳುವಾಗ ಅವರು ಈಜುವುದರಲ್ಲಿ, ಇಳಿ ಮುಳುಗುವುದರಲ್ಲಿ ನದಿಯ ಮೇಲೆ ಮರದ ತುಂಡಿನ ಮೇಲೆ ಕುಳಿತು ಕಸರತ್ತು ಮಾಡುವುದರಲ್ಲಿ ಪ್ರವೀಣರು ಎಂದು ಹೇಳುವನು. ನೋಡಿ, BAS, SPL, II. P. 426

78 Indian Antiquary, Vol XI, P. 127

79 ವಿಸ್ಥಾವ, 2–8 (ವ)

80 ಶಿತಚಿಂ, 1–9; 2ನೇ ದೇವರಾಯನು ಒಮ್ಮೆ 1434 ರಲ್ಲಿ ಮುಚ್ಚೇನ ಹಳ್ಳಿಗೆ ಬೇಟೆಗೆ ಬಂದಾಗ ಜಟ್ಟಂಗಿ ರಾಮೇಶ್ವರ ದರ್ಶನ ಮಾಡಿ, ತನ್ನ ಬೇಟೆಯ ಕುರುಹಾಗಿ 20 ವರಹಗಳ ಆದಾಯ ಬರುವ ಒಂದು ಭೂಮಿಯನ್ನೇ ಉಂಬಳಿಯಾಗಿ ಕೊಟ್ಟನೆಂದು ಒಂದು ವರದಿ ಹೇಳುತ್ತದೆ. (ನೋಡಿ, SPL, II, P. 422)

81 ನೋಡಿ, SPL, II, P. 423

82 ಬೇಟೆಯಲ್ಲಿ ನಾಯಿಗಳ ಅವಶ್ಯಕತೆ ಬಹಳ; "ಬೇಂಟೆವೋ ಪಡೆನಾಯಂ ತವೆ ತಟ್ಟನಡೆವರಲ್ಲದೆ ಕವಿಲೆಯನುಯ್ದಪರೆ" (ಕವಿಜ, 2, ಪು. 178); ನೋಡಿ, ಚಿಕವಂ, 5–11 (ಜಾಯಿಲ); "ಬಲುನಾಯ ಬಾಯಿಂದ ಮುರುಚಿಕೊಂಡೋಡುವ ಮೊಲಂತೋಹುಕಾಱಿರಂ ಹರಿದೆರಗಿ ಕೊಲುವ ಕೋಣಂ" (ಸೋಮಚ, 3–7)

83 ಮಯಣದಂಟು-ಸಲಿಗೆಯಂಟು. ಅಂಟುವಲೆ–ಅಂಟನಕೋಲು

'ಮೃಗಗಳು ಬಲೆಗೆ ಬೀಳಲೋಸುಗ ಹಾಕಿರುವ ಅಂಟಿಗೆ ಸಲಿಗೆಯಂಟು ಎಂದು ಹೆಸರು'—ಎಂದು ಶಿವತತ್ವ ಚಿಂತಾಮಣಿಯ ಅರ್ಥಕೋಶದಲ್ಲಿ (ಶಿತಚಿಂ, 23–16, ಅರ್ಥಕೋಶ, ಪುಟ. 598) ವಿವರಣೆ ಕೊಟ್ಟಿದೆ. ಸಲಿಗೆಯಂಟಿನಂತೆಯೇ ಮಯಣದಂಟೂ ಇರಬೇಕು. ನಾರಣಪ್ಪ ಇನ್ನೊಂದು ಸಂದರ್ಭದಲ್ಲಿ 'ಮಯಣದಂಟಿನ ಮಂಡವಿಗೆ ಬಲೆಗಳ' (ಗಭಾಅ, 13–23) ಎಂದು ಇನ್ನೂ ಸ್ವಲ್ಪ ವ್ಯಾಪಕವಾದ ವಿವರಣೆ ಕೊಡುತ್ತಾನೆ. ಮುದ್ದಣ 'ಅಂಟುವಲೆ' (ರಾಮಶ್ವ, 83–22)ಯ ಹೆಸರು ಹೇಳಿದರೆ, ಕನಕದಾಸರು 'ಅಂಟಿನ ಕೋಲು' (ನಳಚ, 2–10) ಎಂಬ ಇನ್ನೊಂದು ಹೊಸ ಹೆಸರನ್ನು ಹೇಳುತ್ತಾರೆ. ಹೀಗೆ ಈ ಅಂಟಿನ ನಂಟು ಕಗ್ಗಂಟಾಗಿರುವಂತಿದೆ!

84 ನೋಡಿ, ರಾಮವಿ, 15–74; ಚಿಕವಂ, 5–16; ಪಾರ್ಶ್ವನಾಥ ಪುರಾಣ, 12-75

85 ರಾಚ, 27–72; ಬೇಡ ಬೇಡತಿಯರ ಉಡುಗೆ ತೊಡುಗೆಗಳ ಹೆಚ್ಚಿನ ವಿವರಕ್ಕೆ ನೋಡಿ, ಮಅಪು. 31–23, 24; ಕವಿಕನಕದಾಸರು, ಪು. 184; ಸಂಭಾವನೆ (ಬೇಡರ ರಸಿಕತೆ ಎಂಬ ಲೇಖನ, ಪುಟ. 375)

86 ರಾಚ, 27–45; ನೋಡಿ, ರಾಚ, 27–42ರಿಂದ 44; ನೋಡಿ, ಕುರಾಸಾಂ, ಪು. 360.

87 ಕಕನಿ, 4–3950

88 ನೋಡಿ, ಚಿಕವಂ, 5–11; ರಾಚ, 27–44; ತೊರರಾ, 3–3–3

ದೀವದ ಬೇಂಟೆ

89 ಪ್ರಾಣಿ ಪಕ್ಷಿಗಳನ್ನು ಆಕರ್ಷಣೆಯಾಗಿ ಒಡ್ಡಿ ಅವುಗಳ ಆಸೆಯಿಂದ ಬರುವ ಇತರ ಪ್ರಾಣಿಗಳನ್ನು ಬೇಟೆಯಾಡುವ ದೀವದ ಬೇಂಟೆ. ನಾನಾ ತರಹದ ಬೇಟೆಗಳಲ್ಲಿ ಒಂದು ವಿಧ. "ದೀವದ ಬೇಂಟೆಯಂ

ಬಿನ್ನಪಂಗೆಯ್ವೊಡೆ ಕಱಿವು [ಮು]ಱಿವುಂ ಕಾಪುಂ ಮೇಪುಂ.... ಆನೆ ಬಲ್ಲೆಂ'' (ಪಂಪ ಭಾ, 5-43 ವ).

ದೀವದ ಮೃಗ

90 ಬೇಟೆಯಲ್ಲಿ ಕ್ರೂರ ಮೃಗಗಳನ್ನು ಆಕರ್ಷಿಸುವುದಕ್ಕಾಗಿ ಬಳಸುವ ಪ್ರಾಣಿ.

" ಹಾಸದ ಕುನ್ನಿ ದೀವದ ಮೃಗಂ ಬಲೆಪೆರ್ವಡಿ...ಎಂಬೀ ಸಮ ಕಟ್ಟು....ಪೊರಮಟ್ಟುದು ಬೇಂಟೆಗೆ ಲುಬ್ಧಕ ವ್ರಜಂ''(ಪುಷ್ಪಪು,5-99)

ದೀವದ ಹುಲ್ಲೆ

91 ಬೇಟೆಯಲ್ಲಿ ಮೃಗಗಳನ್ನು ಆಕರ್ಷಿಸುವುದಕ್ಕಾಗಿ ಬಳಸುವ ಜಿಂಕೆ, " ಗಿಡಗ ದೀವದ ಹುಲಿ ಸಾಳುವ ಕರಿಕೋಣ ಹಿಡಿಯೆರಲೆಯ ನೊತ್ತವನು ತಡೆಯದೆ ಕೊಂಡೆಯ್ತಂದರು ಬೇಟೆಯ ಕಡುಗಲಿಗಳು.'' (ರಾಜ. 27-44)

ದೀವದ ಹುಲಿ

92 ಬೇಟೆಯಲ್ಲಿ ಇತರ ಮೃಗಗಳನ್ನು ಆಕರ್ಷಿಸಲು ಸೆಳೆಯಾಗಿ ಒಡ್ಡಲು ಉಪಯೋಗಿಸುವ ಹುಲಿ. " ಬೇಡರಾಡಂಬರದಿಂ ದೀವದ ಪುಲಿಗಳ ನಿರಿಸುತೆ ಸೋಹಿದರ್. (ಹಮ್ಮೀರ, 4-42); ನೋಡಿ, ಹಚಕಾ, 5-31 (ಇಲ್ಲಿ ದೀಹದ ಹುಲಿಯ ಕಾರ್ಯಾಚರಣೆಯನ್ನು ಹೇಳಿದೆ);

ತೋಱಿತ್ತು

ದೀಹದ ಎತ್ತು ಕ್ರೂರ ಮೃಗಗಳನ್ನು ಬೇಟೆಯಲ್ಲಿ ಆಕರ್ಷಿಸಲು ಅವುಗಳಿಗೆ ಕಾಣುವಂತೆ ಕಟ್ಟುವ ಎತ್ತು, " ಕಾಂತರದೊಳು ಮೃಗವ ನೆಲೆಗೊಳಿಸಿ ಮೇಗಾಳಿಯಿಂದೂರದಿಂ ತೋಱಿತ್ತನೊಡ್ಡಿ ಕಿಗ್ಗಾಳಿಯಿಂ ಬಂಡಿಯಿಂದಿಳುಹಿ ಹುಲಿಯ ಹಾರಯಿಸಿ '' (ಹಚಕಾ, 5-30)

93 ಹಚಕಾ, 5-49; ಸೂಕ್ತಿಸು, 3-104; ತ್ರಿಪುವಿ, 27-92

94 ಹಚಕಾ, 5-49

95 ಹಚಕಾ, 5-49

96 ತ್ರಿಪುವಿ, 27-92

97 ತ್ರಿಪುವಿ, 27-92,

98 ತ್ರಿಪುವಿ, 27-92, ಸೂಕ್ತಿಸು. 3-104

99 1414 ರಲ್ಲಿ ವಿಜಯನಗರಕ್ಕೆ ಭೇಟಿ ಇತ್ತಿದ್ದ ಅಬ್ದುರ್ ರಜಾಕನು ಜನರು ಆನೆಗಳನ್ನು ಹಿಡಿಯುತ್ತಿದ್ದ ರೀತಿಯನ್ನು ವರ್ಣಿಸುವನು. (ನೋಡಿ, ಪ್ರಕಂಇಂ, ಪು. 158)

100 ಸೊಸೋ, 23-17-7 (ಬಲೆಯಿಂದ ಜಿಂಕೆಯನ್ನು ಹಿಡಿಯುವವರ ಕೇರಿಗಳಿದ್ದವು)

101 2ನೇ ದೇವರಾಯನ ಸೋದರ ಮಹಾಮಂಡಲೇಶ್ವರ ವೀರ ಪಾರ್ವತಿರಾಜ ಒಡೆಯರು ಹಂದಿಬೇಟೆಯಾಡಿದ ವಿಚಾರವನ್ನು ಶಾಸನವೊಂದು ಹೇಳುವುದು. (ನೋಡಿ, SPL II, 424 Ec, IV, ch. 195, ಪು. 24); ಹರಿಶ್ಚಂದ್ರ ಕಾವ್ಯದಲ್ಲಿ ಹಂದಿಬೇಟೆಯ ಸೊಗಸಾದ ಚಿತ್ರವಿದೆ.

102 ಕಾಳಹಸ್ತಿದೇವಾಲಯದಲ್ಲಿ ದೊರಕಿದ 14ನೆ ಶ. ದ. ಒಂದು ದಾಖಲೆ ಅಯೋಧ್ಯಾಪುರದ ದೊರೆ ವೆಳ್ಳಿವರಸು ಎಂಬುವನು 150 ಹುಲಿಗಳನ್ನು ಕೊಂದಂತೆ ಹೇಳಿದೆ. (Epicgraphic Report for 1904, P. 16)

103 ನೋಡಿ, ಸೊ ಸೋ, 11-54 - (ಇಲಿ, ಏಡಿ, ಅಣಿಲು, ಆಮೆ ಮುಂತಾದುವುಗಳನ್ನು ಹಿಡಿದ ವಿಚಾರ ಹೇಳಿದೆ.)

104 'ಜಾಲಗಾರನೊಬ್ಬ ಜಲವ ಹೊಕ್ಕು ಶೋಧಿಸಿ ಹಲವು ಪ್ರಾಣಿಗಳ ಕೊಂದು ನಲಿದಾಡುವ' (ಮಹಾದೇವಿ ಅಕ್ಕನ ವಚನ, 109); 'ಮಾಂಸದಾಸೆಗೆ ಮತ್ಸ್ಯ ಸಿಲುಕಿ ಹಿಂಸೆಪಟ್ಟ ಪರಿಯಂತೆ' (ಪುಕೀ, 1-12); 'ಗಾಳದ ತುದಿಯಲಿಪ್ಪ ಭೂ ನಾಗನ ಕಂಡು ಪ್ರಾಣಾಹುತಿ

ಯೆಂದು ಸವಿವ ಮಿಾನಿನಂತೆ' (ಕಕೀ,72)–ಮೇಲಿನ ಎಡಡು ಚಿತ್ರಗಳೂ ಜಲಜಂತುಗಳಾದ ಮೀನುಗಳನ್ನು ಗಾಳದಿಂದ ಹಿಡಿಯುವ ಚಿತ್ರಗಳು; ಬಲೆಹಾಕಿ ಮೀನು ಹಿಡಿಯುವುದಕ್ಕೆ, ನೋಡಿ, ಹಚಸಾ 3–18. ಜಲಚರದೊಳು ಬೀಸುವಲೆಯು ಹಾಕಿಯೆ ಜಲವನ್ನು ಹೊಕ್ಕು ಶೋಧಿಸುತ'

105 ನೋತ, 19–75; "ಕಾಡೆಮ್ಮೆಯು ಕೋಡು, ವರಹದಂತಿಯು ದಾಡೆ ನಾಡೆ ಶಾರ್ದೂಲ ಸಿಂಹಗಳ ಗೂಢಪಾದಾಂಗುಳಿನಖ ಭೇರುಂಡನ ರೂಢ ಪೆರ್ಗಱಿಯಿತ್ತರೊಲಿದು" (ನೋತ, 19–74); ಬೇಡರು ಹೀಗೆಸಂಗ್ರಹಿಸಿದ ವಸ್ತುಗಳನ್ನು ರಾಜರನ್ನು ಕಂಡು ತಮ್ಮ ಕಷ್ಟಗಳನ್ನು ಹೇಳಿಕೊಳ್ಳಲು ಬಂದಾಗ ಕಾಣಿಕೆಯಾಗಿ ಅರ್ಪಿಸುತ್ತಿದ್ದರು. ಕಂಪಿಲ ದೊರೆ ಬೇಟೆಗೆಂದು ಬಂದಾಗ ಕಾಡಿನಲ್ಲಿ ಬೇಡಪಡೆಯ ನಾಯಕರು ಬಂದು ರಾಜನಿಗೆ ಹುಲಿಯ ತೊಗಲು, ಜಿಂಕೆಮರಿ, ನವಿಲುಗರಿ, ಜೇನ ಕೊಳವೆ, ಹಸ್ತಿದಂತ–ಮುಂತಾದುವುಗಳನ್ನು ಅರ್ಪಿಸಿದರು. (ರಾಚ, 27–38); ಹೋಲಿಸಿ ಹಚಸಾಂ, 3-2.

## ಪರಿಶೀಲಿಸಿದ ಕನ್ನಡ ಸಾಹಿತ್ಯ ಕೃತಿಗಳಲ್ಲಿ ದೊರೆತ ಕ್ರೀಡೆಗಳ ಹೆಸರುಗಳು

1 ಅಟ್ಟುಗುಳಿಯಾಟ
2 ಅಟ್ಟ್ಯಗೂಳಾಟ
3 ಅಣ್ಣೆಕಲ್ಲಾಟ
4 ಅಶ್ವಕ್ರೀಡೆ
5 ಆಳಿನೇರಿಕೆ
6 ಇಂದ್ರಜಾಲ
7 ಉರಿಬಾಣ
8 ಒಪ್ಪಿ
9 ಕಂಬದಗಡಣೆ
10 ಕಟ್ಟುಂಗರೆ
11 ಕಣ್ಣುಮುಚ್ಚಾಲೆ
12 ಕೆಡಹುಕುಟ್ಟುಗ
13 ಕೋಲಾಟ
14 ಕೋಲುಮರನಾಟ
15 ಖಡ್ಗಯುದ್ಧ
16 ಗಜ್ಜುಗ
17 ಗುಡುಗು
18 ಗುಮ್ಮನಗುಸುಕು
19 ಗುಮ್ಮನ ಬಡಿವ ಕತ್ತಲ ಗುದ್ದು
20 ಗುರಿಗುತ್ತು
21 ಗುರಿಯಾಳು ಚೆಂಡಿನ ಹೊಣಕೆ
22 ಗೆರೆದಾಟುವ ಆಟ
23 ಗೊಟ್ಟುಗುಳಿಯಾಟ
24 ಗೊತ್ತಿನ ಚೆಂಡು
25 ಚಕ್ರಬಾಣ
26 ಚದುರಂಗ
27 ಚಿಟ್ಟುಮುರಿಯಾಟ
28 ಚಿಣಿಕೋಲು
29 ಚಿಳ್ಳ ಪಿಳ್ಳಿ
30 ಚೆಂಡಾಟ
31 ಚೇಳುಬಾಣ
32 ಜಲಕ್ರೀಡೆ
33 ಜಾನುಗುಪ್ಪಾಳೆ
34 ಜಿಲಿಬಿಲ್ಲಿ
35 ಜೂಜಾಟ
36 ಟೊಳ್ಳುಗವಡೆ
37 ಡೊಂಬರಾಟ
38 ತಿರಿಕಲ್ಲಾಟ
39 ದಂಡೆಯು
40 ನಿಡುಗವಣೆ
41 ಪಗಡೆ
42 ಪುಷ್ಪ ಬಾಣ
43 ಪೊಡೆಸೆಂಡು
44 ಬಾರುಗುತ್ತ
45 ಬಾಣಬಿರಿಸು

46 ಬೇಟೆ
47 ಬೈರೂಪದಾಟ
48 ಮಲ್ಲಯುದ್ಧ
49 ಮಹೇಂದ್ರಜಾಲ
50 ರಾಯ ಬೊಗರಿ
51 ಲೆತ್ತ
52 ಆಸಗವರಿ
53 ಸರಿಬೆಸ
54 ಸೂಳೆ ಬಂಟಿಕೆ
55 ಸೊಲ್ಲೆಹ
56 ಹರಿಯ ದಶಾವತಾರ ನಾಟಕ
57 ಹರಿಹಲಗೆ
58 ಹಲ್ಲೆಯಾಟ
59 ಹಿಡಿಗವಡೆ
60 ಹಿಡಿಬುಗುರಿ
61 ಹೊನ್ನಗುಬ್ಬಿಯಾಟ

## ಬೇಟೆಯ ವರ್ಣನೆಯಲ್ಲಿ ದೊರೆತ ನಾನಾ ವಿಧವಾದ ಬಲೆಯ ಹೆಸರುಗಳು

1 ಅಂಟುವಲೆ — ರಾಮಾಶ್ವ,-1-80, 83-23
2 ಅಡಕಿಲ್ವಲೆ — ಗಿರಿಕ, 1-80
3 ಆನೆಯ ಬಲೆ — ಪುಣ್ಯಾಸ್ರ, 9-36
4 ಇಡೊವಲೆ — ಶಬಶಂ, 3-24
5 ಎರಳೆವಲೆ — ಸಾಳ್ವಭಾ, 5-19
6 ಉರುವಲೆ — ನವವೊ, 16-20
7 ಕಡ್ಡಿವಲೆ — ತೊರರಾ, 3-3-12
8 ಕಕ್ಕಡವಲೆ — ಶಬಶಂ, 3-24
9 ಕಣ್ಣವಲೆ — ಹಚಕಾ, 5-8, ಅನಂಚ, 12-119
129 (ಕಾಲ್ಕಣ್ಣವಲೆ)
10 ಕಪಿವಲೆ
11 ಕೊಡತಿವಲೆ — ಹಚಕಾ, 5-8
12 ಕೋಲುವಲೆ — —ಅದೇ— ಪುಣ್ಯಾಸ್ರ, 9-36, ಗಭಾಅ
5-33
13 ಕೋಸುವಲೆ — ಸೂಕ್ತಿಸು, 3-10-3
14 ಕುಣಿವಲೆ — ತೊರರಾ, 3-3-12
15 ಕಾಲ್ವಲೆ — ವೋತ, 19-17
16 ಕೊರಲ್ವಲೆ — ,,
17 ಕಾಲ್ಗಣ್ಣವಲೆ — ಅನಂಚ, 12-119
18 ಕಿರುವಲೆ — ,,
19 ಗೂಡುವಲೆ — ಸಾಳ್ವಭಾ, 5-19 ಗಭಾದ್ರೋ 12.3
20 ಗೂಢವಲೆ — ಹಚಕಾ, 5-8
21 ಗೂಂಟವಲೆ — ಗಿರಿಕ, 1-80, ಹಚಕಾ, 5-8
22 ಗಾಢವಲೆ — ಹಚಕಾ, 5-8
23 ಗೋಡುವಲೆ — ದಶಕು, 2-115
24 ಗುಂಡಿವಲೆ — ಪುಣ್ಯಾಸ್ರ, 9-36

| | | |
|---|---|---|
| 25 | ಗೋರಿವಲೆ | ರಾಜಶೇ, 5–14 |
| 26 | ಖಂಡವಲೆ | ರಾಜಶೇ, 5–114 |
| 27 | ಚಕ್ರವಲೆ | ಸಾಳ್ವಭಾ, 5–18 |
| 28 | ತಟ್ಟಿ ಬಲೆ | ಪುಣ್ಯಾಸ್ರ, 9–36, ಹಚಕಾ 5–8 |
| 29 | ತಡಿಕೆವಲೆ | ಹಚಕಾ, 5-8, ರಾಮಾಶ್ವ—83–23 |
| 30 | ತಳ್ಳಿವಲೆ | ಕೌಶಿರಾ, 19–3 (ಹುಲಿಹಿಡಿಯುವ ಬಲೆ) |
| 31 | ತಿಣ್ಣವಲೆ | ಸಾಳ್ವಭಾ, 5–18 |
| 32 | ತೊಟ್ಟವಲೆ | ಹಚಕಾ, 5–8 |
| 33 | ತೊಡರ್ಚುವಲೆ | ಸೌಂದಪು, 18–39 |
| 34 | ತೊಡಕುವಲೆ | ಶಬಶಂ, 3-24; ನವಮೋ, 16–20 |
| 35 | ತೊಳಲ್ವಲೆ | ಸೌಂದಪು, 18–39 |
| 36 | ತೋರುವಲೆ | ಹಚಕಾ, 5–8 |
| 37 | ತೋಳುವಲೆ | ಸೌಂದಪು, 18–39 |
| 38 | ದಡಿವಲೆ | ಗಭಾದ್ರೊ, 12-31 |
| 39 | ದಾವಣಿವಲೆ | ,, |
| 40 | ದೋಂಟಿವಲೆ | ಸೂಕ್ತಿಸು, 13–103 |
| 41 | ನಡುವಲೆ | ಗಿರಿಕ, 1–80 |
| 42 | ನರಿಬಲೆ | ಕಲ್ಯಾರಾಂ 17–109 |
| 43 | ನಡೆವಲೆ | ಶಬಶಂ, 3–24 |
| 44 | ನಿಡಿವಲೆ | ವೋತ, 19–17 |
| 45 | ನೀರ್ವಲೆ | ದಶಕು, 2–115 |
| 46 | ಪಾಸುವಲೆ | ಪುಣ್ಯಾಸ್ರ, 9–36 |
| 47 | ಪಾರವಲೆ | ,, |
| 48 | ಪಿಡಿವಲೆ | ವೋತಾ, 19–17 |
| 49 | ಪೇರ್ವಲೆ | ಸಾಳ್ವಭಾ, 5–18 |
| 50 | ಬಡಿಗೆವಲೆ | ಹಚಕಾ, 5–8 |
| 51 | ಬಡಿವಲೆ | ವೋತ, 19–17 |
| 52 | ಬಳ್ಳಿವಲೆ | ,, |
| 53 | ಬಿರ್ಚುವಲೆ | ರಾಜಶೇ, 5–14 ವ |
| 54 | ಬೀಸುವಲೆ | ರಾಮಾಶ್ವ, 83-23, ಹಚಕಾ, 5–8 |

55 ಬೆಳ್ಳಾರವಲೆ ಮೋತ, 19–17
56 ಮಡಿಕೆವಲೆ ಹಚಕಾ, 5–8
57 ಮುಂದಸಿನವಲೆ ,,
58 ಮಯಣದಂಟಿನ
ಮುಂಡವಿಗೆ ಬಲೆ ಗಭಾಅ, 13–23
59 ಮರೆವಲೆ ಸಾಳ್ವಭಾ, 5–19, ಸೌಂದಪು, 18–39
60 ಮಲೆವಲೆ ಸಿದ್ಧೇಪು, 8–6
61 ಮಿಡಿವಲೆ ಗಭಾಅ, 5–33
62 ಮುಕ್ಕಣ್ಣವಲೆ ಸಾಳ್ವಭಾ, 5–18
63 ಮೋಲ್ವಲೆ ದಶಕು, 2-115
64 ಸಿಕ್ಕುವಲೆ ನವಮೋ, 16–20
65 ಸಿಡಿಲುವಲೆ ,,
66 ಸಿಡಿವಲೆ ಗಭಾದ್ರೌ, 12-3, ಶಬಶಂ, 3-24
67 ಸೆಳೆವಲೆ ಮೋತ, 19–17
68 ಸಾಲುವಲೆ ಸಿದ್ಧೇ ಪು, 8–16
69 ಸಗಾಢವಲೆ ಸೌಂದಪು, 18–39
70 ಸೊರ್ಕು
ಮದ್ದು ಪೆರ್ಬಲೆ ದಶಕು, 2–115
71 ಹಂದಿ ಬಲೆ ಸಾಳ್ವಭಾ, 5–19
72 ಹಾರುವಲೆ ಹಚಕಾ, 5–8
73 ಹಾಸುವಲೆ ,,
74 ಹಿಂಡುವಲೆ ಗಭಾಅ, 13–23
75 ಹುಲಿಬಲೆ ಕಲ್ಯಾರಾಂ, 17–109
76 ಹೆಬ್ಬಲೆ ಗಭಾಅ, 13–23
77 ಹೊಸದಿಕ್ಕಣ್ಣಿವಲೆ ಸಾಳ್ವಭಾ, 5–18
78 ಜಲ್ಲೆವಲೆ ಸಾಳ್ವಭಾ, 5–19
79 ಜಾರುವಲೆ ಹಚಕಾ, 5–8
80 ಜೋಡುವಲೆ ಸಾಳ್ವಭಾ, 5–18

# ಆಧಾರ ಗ್ರಂಥಗಳು

## ಎ ಸಾಹಿತ್ಯ ಕೃತಿಗಳು


| | | | | |
|---|---|---|---|---|
| 1. | ಅಂಜಚ | ಅಂಜನಾ ಚರಿತ್ರೆ | ಶಿಶುಮಾಯಣ | 1233 |
| 2. | ಅನಂಪು | ಅನಂತನಾಥ ಪುರಾಣ | ಜನ್ನ | 1209 |
| 3. | ಆನಂರಾ | ಆನಂದರಾಮಾಯಣ | ತಿಮ್ಮ ಕವಿ | 17ನೆ ಶತಮಾನ |
| 4. | ಉದ್ಭದೇ | ಉದ್ಭಟದೇವ ಚರಿತೆ | ಬಸವಾಂಕ | 1550 |
| 5. | ಏಲೇಶ್ವ | ಏಲೇಶ್ವರ ಕೇತಯ್ಯನ ವಚನಗಳು | ವ್ಯೆ ಓ ಲ್ಯೆ | 1150 |
| 6. | ಕಕೀ | ಕನಕದಾಸರ ಕೀರ್ತನೆಗಳು | | 1550 |
| 7. | ಕಂನವಿ | ಕಂಠೀರವ ನರಸರಾಜ ವಿಜಯ | ಗೋವಿಂದ ವೈದ್ಯ | 1648 |
| 8. | ಕುಸುಮಾ | ಕುಸುಮಾವಳಿ | ದೇವಕವಿ | 1200 |
| 9. | ಕವಿಚ II | ಕರ್ಣಾಟ ಕವಿಚರಿತ್ರೆ | ಸಂ. ಆರ್. ನರಸಿಂಹಾಚಾರ್ (ಮುದ್ರಣ) | 1907 |
| 10. | ಕೆಳದಿ | ಕೆಳದಿನೃಪವಿಜಯ | ಲಿಂಗಣ್ಣ | 18ನೆ ಶತಮಾನ |

| | | | | |
|---|---|---|---|---|
| 11. | ಗಭಾ | ಗದುಗಿನ ಭಾರತ | ನಾರಣಪ್ಪ | 1430 |
| 12. | ಚಂದ್ರಪು | ಚಂದ್ರಪ್ರಭ ಪುರಾಣ | ಅಗ್ಗಳ | 1189 |
| 13. | ಚಂಪ್ರಸಾ | ಚಂದ್ರಪ್ರಭ ಸಾಂಗತ್ಯ | ದೊಡ್ಡಯ್ಯ | 1612 |
| 14. | ಚಂದ್ರಹಾ | ಚಂದ್ರಹಾಸನ ಕಥೆ | ಹೆಳವನ ಕಟ್ಟೆಗಿರಿಯಮ್ಮ | 1750 |
| 15. | ಚಿಕವಂ | ಚಿಕದೇವರಾಜ ವಂಶಾವಳಿ | ತಿರುಮಲಾರ್ಯ | 1670 |
| 16. | ಚಿಬಪು | ಚಿನ್ನಬಸವ ಪುರಾಣ | ವಿರೂಪಾಕ್ಷ ಪಂಡಿತ | 1584 |
| 17. | ಚೇಕಾ | ಚೇರಮ ಕಾವ್ಯ | ಚೇರಮಾಂಕ | 1526 |
| 18. | ಜಿನಭಾ | ಜಿನ ಭಾರತ | ಬ್ರಹ್ಮಣಾಂಕ | 1750 |
| 19. | ಜೀವಂಚ | ಜೀವಂಧರ ಚರಿತೆ | ಭಾಸ್ಕರ | 1424 |
| 20. | ಜೈಮಿಭಾ | ಜೈಮಿನಿ ಭಾರತ | ಲಕ್ಷ್ಮೀಶ | 1700 |
| 21. | ತುರಂಗ | ತುರಂಗ ಭಾರತ | ಪರಮದೇವ | 1777 |
| 22. | ತ್ರಿಪುವಿ | ತ್ರಿಷಷ್ಟಿಪುರಾತನ ವಿಳಾಸ | ಸುರಂಗ | 1500 |
| 23. | ತೊರರಾ | ತೊರವೆಯ ರಾಮಾಯಣ | ನರಹರಿ | 1500 |
| 24. | ದಶಕು | ಅಭಿನವದಶಕುಮಾರ ಚರಿತೆ | ಚೌಂಡರಸ | 1300 |
| 25. | ಧರ್ಮಾಮೃ | ಧರ್ಮಾಮೃತ | ನಯಸೇನ | 1112 |
| 26. | ನಳಚ | ನಳಚರಿತ್ರೆ | ಕನಕದಾಸ | 1550 |
| 27. | ನೀತಿಸಾ | ನೀತಿಸಾರ | ಜ್ಞಾನೇಶ್ವರ ಪಂಡಿತ | 19ನೇ ಶತಮಾನ |

| | | | | |
|---|---|---|---|---|
| 28. | ನೇಮಿಸಂ | ನೇಮಿ ಜಿನೇಶ ಸಂಗತಿ | ಮಂಗರಸ III | 1508 |
| 29. | ಪಂಪಭಾ | ಪಂಪ ಭಾರತ | ಪಂಪ | 941 |
| 30. | ಪ್ರಸಭಾ | ಪ್ರಸನ್ನ ವೆಂಕಟರ ಭಾಗವತ | ಪ್ರಸನ್ನ ವೆಂಕಟದಾಸ | 1752 |
| 31. | ಪುಕೀ | ಪುರಂದರದಾಸರ ಕೀರ್ತನೆ | | 1540 |
| 32. | ಪುಣ್ಯಾಸ್ರ | ಪುಣ್ಯಾಸ್ರವ | ನಾಗರಾಜ | 1331 |
| 33. | ಪುಷ್ಪಪು | ಪುಷ್ಪದಂತ ಪುರಾಣ | ಗುಣವರ್ಮ II | 1235 |
| 34. | ಪ್ರೌಕಾ | ಪ್ರೌಢರಾಯನ ಕಾವ್ಯ | ಅದೃಶ್ಯ ಕವಿ | 1580 |
| 35. | ಬಸಪು | ಬಸವ ಪುರಾಣ | ಭೀಮಕವಿ | 1369 |
| 35a | ಭವೈ | ಭರತೇಶ ವೈಭವ | ರತ್ನಾಕರ | 1560 |
| 36. | ಮಅಪು | ಮಹಾದೇವಿ ಅಕ್ಕಪುರಾಣ | ಚೆನ್ನಬಸವಾಂಕ | 1550 |
| 37. | ಮದತಿ | ಮದನ ತಿಲಕ | ಚಂದ್ರರಾಜ | 1079 |
| 38. | ಮರಾಚ | ಮೈಸೂರು ಮಹಾರಾಜ ಚರಿತೆ | ಅಯ್ಯಾಶಾಸ್ತ್ರಿ | 1916 |
| 39. | ಮೋತ | ಮೋಹನ ತರಂಗಿಣಿ | ಕನಕದಾಸರು | 1550 |
| 40. | ರಾಮವಿ | ರಾಮವಿಜಯ ಕಾವ್ಯ | ದೇವಪ್ಪ | 1525 |
| 41. | ರಾಚ | ರಾಮನಾಥಚರಿತೆ | ನಂಜುಂಡಕವಿ | 1525 |
| 42. | ರಾಮಾಶ್ವ | ರಾಮಾಶ್ವಮೇಧ | ಮುದ್ದಣ | 1903 |
| 43. | ಶಂಕದಾ | ಶಂಕರದಾಸಿಮಯ್ಯ ಪುರಾಣ | ಮಲ್ಲಿಕಾರ್ಜುನ | 1607 |

| | | | | |
|---|---|---|---|---|
| 44. | ಶಿತಚಿಂ | ಶಿವತತ್ವಚಿಂತಾಮಣಿ | ಲಕ್ಕಣ ದಂಡೇಶ | 1430 |
| 45. | ಸನತ್ಕುಚ | ಸನತ್ಕುಮಾರ ಚರಿತೆ | ಬೊಮ್ಮರಸ | 1485 |
| 46. | ಸವ | ಸರ್ವಜ್ಞನ ವಚನಗಳು | | 1700 |
| 47. | ಸೊಸೋ | ಸೊಬಗಿನ ಸೋನೆ | ದೇಪರಾಜ | 1410 |
| 48. | ಸೋಶ | ಸೋಮೇಶ್ವರ ಶತಕ | ಸೋಮನಾಥ | 1195 |
| 49. | ಸೋಮಚ | ಸೋಮನಾಥ ಚರಿತೆ | ರಾಘವಾಂಕ | 1165 |
| 50. | ಹಚಕಾ | ಹರಿಶ್ಚಂದ್ರಕಾವ್ಯ | ರಾಘವಾಂಕ | 1165 |
| 51. | ಹಚಸಾ | ಹರಿಶ್ಚಂದ್ರ ಸಾಂಗತ್ಯ | ಬೊಂಬೆಯಲಕ್ಕ | 1538 |
| 52. | ಹಮ್ಮೀರ | ಹಮ್ಮೀರಕಾವ್ಯ | ಮುಂಗಿದೇಶಿಕೇಂದ್ರ | 1540 |

## ಬಿ. ಆಧಾರ ಗ್ರಂಥಗಳು (ಮುಂದುವರೆದುದು)


| | | |
|---|---|---|
| ಕಜಜೀ | ಕರ್ಣಾಟಕ ಜನಜೀವನ | ಬೆಟಗೇರಿ ಕೃಷ್ಣಶರ್ಮ |
| ಕವಿಕ | ಕವಿ ಕನಕದಾಸರು | ಕಟ್ಟಿ ಶೇಷಾಚಾರ್ಯ |
| | ಕುಮಾರರಾಮನ ಸಾಂಗತ್ಯಗಳು | ಜಿ. ವರದರಾಜಾರಾವ್ |
| ಪ್ರಕಂಇಂ | ಪ್ರವಾಸಿಕಂಡ ಇಂಡಿಯಾ, ಭಾಗ–೨ | ಅನು. ಎಚ್. ಎಲ್. ನಾಗೇಗೌಡ |
| | ಸಂಭಾವನೆ | ಶ್ರೀಯುವರ ಅಭಿನಂದನ ಗ್ರಂಥ |

## ಸಿ. ನಿಘಂಟು

| | | |
|---|---|---|
| ಕಕನಿ | ಕನ್ನಡ–ಕನ್ನಡ ನಿಘಂಟು ಭಾಗ 1, 2, 3, 4 | ಕ. ಸಾ. ಪರಿಷತ್ |
| ಕನಿ | ಕುಮಾರವ್ಯಾಸ ನಿಘಂಟು | ಎನ್ಕೆ |
| ಶ್ರೀವತ್ಸನಿ | ಶ್ರೀವತ್ಸ ನಿಘಂಟು | ಸಂ. ಟಿ. ವಿ. ವೆಂಕಟಾಚಲಶಾಸ್ತ್ರೀ |

## D. English Books

AASL — 1 Administration and Social Life under Vijayanagar. *T. V. Mahalingam*

SPL II — 2 Social and Political Life in Vijayanagar, Part II *B. A. Saletore*

3 Studies in Indian Cultural History, Vol. II, 1:60 *P. K. Gode*

## E. Reports

1. Epigraphical Report for 1914–15
2. Indian Antiquary Vol. XI
3. Mysore Archaeological Report 1914-15

## ಪರಿಶಿಷ್ಟ

[ ಈ ಕೆಲವು ಹೆಸರುಗಳು ಒಂದು ಬಗೆಯ ಆಟ ಎಂದು ನಿಘಂಟು ಹೇಳುತ್ತದೆ. ಆದರೆ ಕಾವ್ಯ ಪ್ರಯೋಗಗಳು ಕೇವಲ ಒಂದೊ ಎರಡೊ ! ]

1 ಜಿಲಿಬಿಲ್ಲಿ

'ಗುಲಗಂಜಿ ಗುಪ್ಪೆಂದೆ ಬಿಲ್ಲೈ ಹರಳು ಜಿಲಿಬಿಲ್ಲಿ ಜಿಂಕೆ ಭೊಗ ಚೆಂಡು.' ವಿಸೊತ್ರಸು 19-3 ನೋಡಿ, ಕಕನಿ, 3-3065

2 ಜಾನುಗುಪ್ಪಾಳೆ

'ಬಾಗವಾಡಿಯ ಬಸವಂಗೆ ಮಹಾಮೇರು ಪರ್ವತಂ ಜಾನ ಗುಪ್ಪಾಳೆಯಾಡುವ ಬೆಟ್ಟದಂತೆ' (ಕಾಶಕ್ಕೃ, 300; ಕಕನಿ, 3-3039

3 ಚಿಳ್ಳಪಿಳ್ಳಿ—(ಮಕ್ಕಳಾಟ)

'ಬೆಳ್ಳಿ ಬಂಗಾರಿಟ್ಟುಕೊಂಡು ಒಳ್ಳೆವಸ್ತ್ರಹೊದ್ದುಕೊಂಡು ಚಿಳ್ಳ ಪಿಳ್ಳಿ...ಗೊಂಬೆಯಂತೆ ಆಡಿಹೋಯಿತು' (ಕನಕ, 117-3) ಕಕನಿ, 3-2790

4 ಕಟ್ಟುಂಗರೆ

'ಕರಮೆಸೆವ ಬೊಗರಿ ಕಟ್ಟುಂಗರೆ ತಿಱಿಕಲ್ ಚಂಡುಗ ನೊಜಿಲ್ಲಾಡುತಮಾ...ಬಾಲಮಧ್ಯದೊಳಿರ್ದರ್' (ವಿಷ್ಣುಪು, 5- -159; ಕಕನಿ, 2-1391)

ಗಾಳಿಪಟದ ಹೆಸರು ಒಂದೆರಡು ಕಾವ್ಯಗಳಲ್ಲಿ ದೊರೆಯುತ್ತದೆ

" ಪಸುರ್ವಟ್ಟೆಯ ತೊಳಗುವ ಗಾಳಿಪಟಕೆ ಕಟ್ಟಿದ ರಜ್ಜುವಿದೊ ಎಂಬಂತೆ " (ಜಯನೃಪಕಾವ್ಯ, 1-41)

" ಪಟಗಾರನುರೆ ಸೂತ್ರವಿಡಿದಿದ್ದರಾ ಗಾಳಿಪಟ ಗಗನದೊಳಾಡ ವಂತೆ " (ಭವ್ಯ, 2-43)

ಕೆ.ಸಂ. 24384-ಎಂ.ಯು.ಪಿ.ಎಂ.-5,000 ಪ್ರತಿಗಳು—19-12-8

## ಕೆಲವು ಸಾಹಿತ್ಯ ಕೃತಿಗಳು

೧. ಕುಮಾರವ್ಯಾಸ—ಎಸ್. ವಿ. ರಂಗಣ್ಣ
೨. ಹಂಪೆಯ ಹರಿಹರ—ಡಿ. ಎಲ್. ನರಸಿಂಹಾಚಾರ್
೩. ಕನ್ನಡ ಸಾಹಿತ್ಯ—ಕೆ. ವೆಂಕಟರಾಮಪ್ಪ
೪. ಪಂಪ—ತೀ. ನಂ. ಶ್ರೀಕಂಠಯ್ಯ
೫. ಕರ್ಣಾಟಕ ಕಾದಂಬರಿ—ವಿ. ಸೀತಾರಾಮಯ್ಯ
೬. ಕಾಳಿದಾಸನ ಕಾವ್ಯಗಳು—ಎಸ್. ರಾಮಚಂದ್ರರಾವ್
೭. ಭಾಸ—ಡಾ. ಎಚ್. ಎಲ್. ಹರಿಯಪ್ಪ
೮. ಸರ್ವಜ್ಞಕವಿ—ಎ. ಆರ್. ಕೃಷ್ಣಶಾಸ್ತ್ರೀ
೯. ಇಂಗ್ಲಿಷ್ ಪ್ರಬಂಧಗಳು—ಎಸ್. ಮಂಜುನಾಥ್
೧೦. ಅಕ್ಕಮಹಾದೇವಿ—ಎಸ್. ವಿ. ಪರಮೇಶ್ವರಭಟ್ಟ
೧೧. ಕುಮಾರವ್ಯಾಸ ವಾಣಿ—ಎಸ್. ವಿ. ರಂಗಣ್ಣ
೧೨. ನಯಸೇನ—ಜಿ. ವೆಂಕಟಸುಬ್ಬಯ್ಯ
೧೩. ತೆಲುಗು ಚಾಟುಪದ್ಯಗಳು—ಕೆ. ವೆಂಕಟರಾಮಪ್ಪ
೧೪. ಲಕ್ಷ್ಮೀಶ—ಎನ್. ಅನಂತರಂಗಾಚಾರ್
೧೫. ಮುದ್ದಣ—ತ. ಸು. ಶಾಮರಾವ್
೧೬. ಜನಪದ ಮುಕ್ತಕಗಳು—ಎಚ್. ಎಂ. ಶಂಕರನಾರಾಯಣರಾವ್
೧೭. ಭಾವಗೀತೆ—ಎಸ್. ವಿ. ಪರಮೇಶ್ವರಭಟ್ಟ
೧೮. ಮಹಾಭಾರತ—ಡಾ. ಕೆ. ಕೃಷ್ಣಮೂರ್ತಿ
೧೯. ನೇಮಿಚಂದ್ರ—ಎನ್. ಅನಂತರಂಗಾಚಾರ್
೨೦. ಶ್ರೀನಾಥ—ಕೆ. ವೆಂಕಟರಾಮಪ್ಪ
೨೧. ಷಡಕ್ಷರದೇವ—ದೇ. ಜವರೇಗೌಡ
೨೨. ಚಿತ್ರಾಂಗದಾ—ಉ. ಕಾ. ಸುಬ್ಬರಾಯಾಚಾರ್
೨೩. ಸಂಚಿಯ ಹೊನ್ನಮ್ಮ—ಎಚ್. ಎಂ. ಶಂಕರನಾರಾಯಣರಾವ್
೨೪. ವಾಲ್ಮೀಕಿ ರಾಮಾಯಣ—ಉ. ಕಾ. ಸುಬ್ಬರಾಯಾಚಾರ್
೨೫. ಮಹಾಕವಿ ಬಾಣ—ಟಿ. ಎಸ್. ಕೃಷ್ಣಮೂರ್ತಿ
೨೬. ತುಳಸೀದಾಸ—ಡಾ. ಹಿರಣ್ಮಯ
೨೭. ವೇಮನ—ಕೆ. ವೆಂಕಟರಾಮಪ್ಪ
೨೮. ಕನ್ನಡದಲ್ಲಿ ಅನುಭಾವ ಸಾಹಿತ್ಯ—ಡಾ. ಎಚ್. ತಿಪ್ಪೇರುದ್ರಸ್ವಾಮಿ

೨೯. ಅಲ್ಲಮಪ್ರಭು—ಡಾ. ಟಿ. ಜಿ. ಸಿದ್ಧಪ್ಪಾರಾಧ್ಯ
೩೦. ಕಾಳಿದಾಸನ ನಾಟಕಗಳು—ಡಾ. ಕೆ. ಕೃಷ್ಣಮೂರ್ತಿ
೩೧. ಅಣ್ಣನ ಆದರ್ಶ—ಡಾ. ಟಿ. ಜಿ. ಸಿದ್ಧಪ್ಪಾರಾಧ್ಯ
೩೨. ಹೊಸಗನ್ನಡ ಭಾವಗೀತೆಗಳಲ್ಲಿ ಜೀವನ ವಿಕಾಸ—
ದೇವಂಗಿ ಟಿ. ಚಂದ್ರಶೇಖರ
೩೩. ಸೂರದಾಸ—ಎಂ. ಎಸ್. ಕೃಷ್ಣಮೂರ್ತಿ
೩೪. ಜನ್ನ—ಡಾ. ಸಿ. ಪಿ. ಕೃಷ್ಣಕುಮಾರ್
೩೫. ರತ್ನಾಕರ ಮಹಾಕವಿ—ಜಿ. ಬ್ರಹ್ಮಪ್ಪ
೩೬. ಮಾಘಕವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೩೭. ನಿಜಗುಣಶಿವಯೋಗಿ—ಎಚ್. ಗಂಗಾಧರನ್
೩೮. ಮುದ್ರಾರಾಕ್ಷಸ—ಡಾ. ಎನ್. ಎಸ್. ಅನಂತರಂಗಾಚಾರ್
೩೯. ರಾಘವಾಂಕ—ರಾಮೇಗೌಡ
೪೦. ಮೂರನೆಯ ಮಂಗರಸ ಕವಿ—ಹಂಪ ನಾಗರಾಜಯ್ಯ
೪೧. ನಾಗಚಂದ್ರ—ಡಾ. ಸಿ. ಪಿ. ಕೃಷ್ಣಕುಮಾರ್
೪೨. ವಡ್ಡಾರಾಧನೆ—ಹಂಪ ನಾಗರಾಜಯ್ಯ
೪೩. ಮಹಾಕವಿ ಭಾರವಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೪. ಕವಿ ಮುರಾರಿ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೫. ಚನ್ನಬಸವಣ್ಣ—ಓ. ಎನ್. ಲಿಂಗಣ್ಣಯ್ಯ
೪೬. ಕವಿ ಶ್ರೀ ಹರ್ಷ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೪೭. ಕಬೀರದಾಸ—ಡಾ. ಹಿರಣ್ಮಯ
೪೮. ವಿದ್ಯಾಪತಿ—ಎಂ. ಎಸ್. ಕೃಷ್ಣಮೂರ್ತಿ
೪೯. ಕವಿ ಭಟ್ಟನಾರಾಯಣ—ವಿದ್ವಾನ್ ಎಂ. ಜಿ. ನಂಜುಂಡಾರಾಧ್ಯ
೫೦. ಕಾವ್ಯದಲ್ಲಿ ಧ್ವನಿ—ಗುರುಪಾದ ಕೆ. ಹೆಗಡೆ
೫೧. ಪೊನ್ನ—ಎನ್. ಅನಂತರಂಗಾಚಾರ್
೫೨. ಎಡೆಯೂರು ತೋಂಟದ ಸಿದ್ಧಲಿಂಗಯತಿ—ಓ. ಎನ್. ಲಿಂಗಣ್ಣಯ್ಯ
೫೩. ದೇವರ ದಾಸಿಮಯ್ಯ—ಕೆ. ಅನಂತರಾಮು
೫೪. ಸಂಸ್ಕೃತ ಸಾಹಿತ್ಯ—ಡಾ. ಆರ್. ಎಸ್. ಶಿವಗಣೇಶಮೂರ್ತಿ
೫೫. ಚಾಮುಂಡರಾಯ—ಡಾ. ಟಿ. ವಿ. ವೆಂಕಟಾಚಲಶಾಸ್ತ್ರೀ
೫೬. ಶ್ರೀ ಸಮರ್ಥ ರಾಮದಾಸರು—ಬಿ. ಪಿ. ಚಂದ್ರಾಬಾಯಿ
೫೭. ಉಪಭಾಷಾ ಅಧ್ಯಯನ—ಶಾಲಿನಿ ರಘುನಾಥ
೫೮. ಭಾರತೀಯ ಮಹಿಳಾ ಪರಂಪರೆ—ಬಿ. ಪಿ. ಚಂದ್ರಾಬಾಯಿ
೫೯. ಬಂಧುವರ್ಮ—ಬಿ. ಎಸ್. ಸಣ್ಣಯ್ಯ
೬೦. ಶ್ರೀರಾಮಾಯಣದರ್ಶನಂ—ಒಂದು ಸಮೀಕ್ಷೆ—ಡಾ. ಸಿ. ಪಿ.
ಕೃಷ್ಣಕುಮಾರ್